# ಜೀವನ ದರ್ಶನ

## ಜಗನ್ನಾಗರಿಕನಿಗೆ
## ಮರ್ಮಜ್ಞನ ಮಾರ್ಗದರ್ಶನ

"ಇಂದಿಗನಿಗಲ್ಲದೆ ಎಂದಿಗನಿಗೂ ಮಿಗಿಲಾದ ಮಾರ್ಗದರ್ಶಕ
ವಚನಾಮೃತಮಿದಮ್"—ರಸಜ್ಞ

ಲೇಖಕರು:
**"ಮರ್ಮಜ್ಞ" (P. V. Joglekar)**



ಪ್ರಕಾಶಕರು:
ಶ್ರೀ ಪಾಂಡುರಂಗಶರ್ಮಾ ಜೋಗಳೇಕರ,
"ಸುನಂದಾ ನಿವಾಸ", ಹಾವೇರಿ, ಜಿ. ಧಾರವಾಡ

'ತರುಣರ ಕೂಟ'ದ ಪರವಾಗಿ

ಬೆಲೆ: ರೂ. ೧-೦೦. ಒಂದು ರೂಪಾಯಿ.

# ಸ್ವತಂತ್ರ ವಿಚಾರಸರಣಿಗಾಗಿ ರೂಢಿರಕ್ಕಸನಿಗೆ ಆಹುತಿಯಾದ



ಜಗದ್ವಂದ್ಯ ಸಾಕ್ರೆಟಸ್

**ಪ್ರಾಜ್ಞ ನಾನೆಂಬುವನು । ಅಜ್ಞಾನಸಾಗರನೆ !**
**ಅಜ್ಞ ನಾನೆಂಬ ಜಿಜ್ಞಾಸು ವಿದ್ಯಾರ್ಥಿ**
**ಪ್ರಾಜ್ಞ ವಿಜ್ಞಾನಿ ಮರ್ಮಜ್ಞ ॥**

# ಮುನ್ನುಡಿ

---

**ಮುನ್ನಡೆವ ನಾಡಿಗನಿ । ಗೆನ್ನನುಡಿ ಮಿಷ್ಟಾನ್ನ**
**ಹಿನ್ನಡೆವ ರೂಢಿ ಮೂಢಂಗೆ ಮುನ್ನುಡಿವ**
**ನನ್ನನುಡಿ ಮುದ್ದು ಮರ್ಮಜ್ಞ ॥**

ಇಂದಿನ ನಾಡಿಗನು ಹಿಂದಿಗನಂತೆ ಪರಂಪರಾಗತ ಸಂಪ್ರದಾಯಗಳ ದಾಸನಾಗಿ ಬಾಳಲೊಲ್ಲ, ಬಾಳಲಾರ. ಇಂದಿಗನು ಸಂಪೂರ್ಣ ನಾಗರೀ ಅಧಿಕಾರಗಳುಳ್ಳ ಜನತಾರಾಜ್ಯದ ಪ್ರಾಜ್ಞ ಹೊಣೆಗಾರ ನಾಗರಿಕ. ಹಿಂದಿಗನು ಸಾಮ್ರಾಜ್ಯ ಪ್ರಭುತ್ವದ ಇಲ್ಲವೆ ರಾಜಪ್ರಭುತ್ವದ ಪ್ರಜ್ಞಾವಿಹೀನ, ದಾಸ್ಯ ಮನೋವೃತ್ತಿಯ, ಸಾಂಪ್ರದಾಯಿಕ ವಿಚಾರಸರಣಿಯ, ಪರತಂತ್ರ ನಾಡಿಗ. ಆಗ ವರ್ಣ, ವಂಶ, ಮುಂತಾದವುಗಳಿಗನುಗುಣವಾಗಿ ನಾಗರಿಕನ ಸ್ಥಾನಮಾನ ವಿದ್ದಿತು. ಆಚಾರವಿಚಾರಗಳೆಲ್ಲ ಸಂಪ್ರದಾಯಬದ್ಧವಾಗಿದ್ದವು. ಸ್ವಾತಂತ್ರ್ಯದ ಸುದ್ದಿಯೂ ಇದ್ದಿಲ್ಲ. ತಾರತಮ್ಯದೂಷಿತ ಅಂದಿನ ಮಾನವೀ ಸಮಾಜದಲ್ಲಿ ಮಾನವರೇ ಇದ್ದಿಲ್ಲ! ಏಕೆಂದರೆ ರಾಜರು ಪ್ರತ್ಯಕ್ಷ ದೇವತೆಗಳು ಅವರ ಗುರು ವರ್ಗದವರು ಭೂದೇವತೆಗಳು, ಉಳಿದವರು ಕಿನ್ನರರು, ಇನ್ನುಳಿದವರು ದಾನವರು! ಅಂದಿನ ಜನಗಣಗಳು ಸಮಾಜವಾಗಿರದೆ ದ್ವಿಪಾದ ಪಶುಗಳ ತಂಡಗಳಾಗಿದ್ದವು. ಅಪವಾದಭೂತ ಸಂತ, ಸಜ್ಜನರಲ್ಲಿ ಮಾತ್ರ ಮಾನ ವತೆಯು ಮಿಂಚುತ್ತಿತ್ತು.

ಇಂದಿನ ನಮ್ಮ ಸಮಾಜದಲ್ಲಿ ವಿಸ್ಮಯಜನಕ ಪರಿವರ್ತನ ಕಂಡು ಬರುತ್ತಿದೆ. ರಾಜರನ್ನೂ, ಸಮ್ರಾಟರನ್ನೂ ಪದಚ್ಯುತಮಾಡಿ ನಾಗರಿಕ ರೆಲ್ಲರೂ ಸಮಾನಾಧಿಕಾರದಿಂದ ರಾಜ್ಯಸೂತ್ರಗಳನ್ನು ಧರಿಸಿದ್ದಾರೆ. ಜನರ ಸಲುವಾಗಿ, ಜನಮೆಚ್ಚುಗೆಯಿಂದ ಸಾಗುವ ಜನರ ರಾಜ್ಯ ಇಲ್ಲವೆ ಲೋಕ ಪ್ರಭುತ್ವವಿದೆ ಈಗ.

ಸಾರ್ವತ್ರಿಕ ಸಮಾನ ಮತದಾನದಿಂದ ನಮ್ಮಗಳಿಗೆ ರಾಜಕೀಯ ಸಮತ್ವ ಮತ್ತು ಸ್ವಾತಂತ್ರ್ಯ ಬಂದಿರುವುದೇನೋ ನಿಜ. ಆದರೆ ಸಮಾಜದಲ್ಲಿ

ಇನ್ನೂ ಬಾಂಧವ್ಯ ಮಾತ್ರ ಮೂಡಿಲ್ಲ. ಇದರ ಕಾರಣ ಆರ್ಥಿಕ ವೈಷಮ್ಯ. ಆರ್ಥಿಕ ಸಾಮ್ಯವಿಲ್ಲದೆ ಬರಿ ರಾಜಕೀಯ ಸಾಮ್ಯ ಅರ್ಥಶೂನ್ಯವಾಗುವುದಕ್ಕೆ ಇದುವೆ ಪ್ರಮಾಣ. ಆರ್ಥಿಕ ಸುಸ್ಥಿತಿ ಇರದ ಹೊರ್ತು ಬಾಂಧವ್ಯ ಬಾರದು. ಎಲ್ಲರ ಗಳಿಕೆಯಲ್ಲಿ ಸಾಮ್ಯ ಬಂದವಿನಾ ಬಂಧುತ್ವ ಶಕ್ಯವಿಲ್ಲ. ಹರಕು ಬಟ್ಟೆತೊಟ್ಟ ಅರೆಹೊಟ್ಟೆಯ ಬಡವರಿಗೂ ಜರದ ಬಟ್ಟೆಗಳಲ್ಲಿ ಮೆರೆ ದಾಡುವ ಅತ್ಯಶನದಿಂದ ಕೊಬ್ಬಿದ ಸಿರಿವಂತರಿಗೂ ಸಖ್ಯವು ಶಕ್ಯವೆ? ಇದರ ವಿವೇಚನವು ಈ ಗ್ರಂಥದ ಆರ್ಥಿಕ ವಿಭಾಗದಲ್ಲಿ ಕಾಣಬಹುದಾಗಿದೆ.

ಪ್ರಪಂಚದಲ್ಲಿ ಇನ್ನೂ ಅಲ್ಲಲ್ಲಿ ಕಳವು, ಸುಳ್ಳು, ಕೊಲೆ ಸುಲಿಗೆ ಕಂಡು ಬರುವ ಕಾರಣವೇನು? ದಾರಿದ್ರ್ಯದೋಷವು ಗುಣಕೋಟಿ ನಾಶಮಾಡುವು ದೆಂಬ ಹಿಂದಣ ಒಬ್ಬ ಕವಿಯ ಮಾತೆ ಇದಕ್ಕೆ ತಕ್ಕ ಉತ್ತರ ಕೊಡಲಿ. ಸಾಮ್ಯವಾದೀ ಸಮಾಜ ರಚನೆ ಅಪರಿಹಾರ್ಯವೆಂಬುದನ್ನು ಈ ಗ್ರಂಥದಲ್ಲಿ ಚೆನ್ನಾಗಿ ತೋರಿಸಲಾಗಿದೆ.

ಸಾಂಪ್ರದಾಯಿಕ, ಪರದತ್ತ, ದೀಕ್ಷಾಬದ್ಧ ಜೀರ್ಣ ಮತಪಂಥಗಳು ಇಂದಿನ ಸ್ವಯಂಪ್ರಜ್ಞ ನಾಗರಿಕನಿಗೆ ಸರಿಹೋಗವು ಎಂಬುದನ್ನೂ ಅನೇಕ ತ್ರಿಪದಿಗಳು ತೋರಿಸಿ ಕೊಡುವವು. ಸ್ವತಂತ್ರ ವಿಚಾರ ಸರಣಿಯ ಇಂದಿಗನು ದ್ವಾಪರ ಯುಗದ ಪರಲೋಕವಾದ, ನಿರಾಶಾವಾದ, ನಿರಂಕುಶ ರಾಜನ ಮಾದರಿಯ ಜಗದೀಶನ ಕಲ್ಪನೆ, ಅಂದಿನ ತಾರತಮ್ಯದೂಷಿತ ಅಮಾನುಷ ಸಮಾಜರಚನೆ, ಅಂಧಶ್ರದ್ಧೆಯನ್ನಾಶ್ರಯಿಸಿ ಮಾನವನ ಅಮಾನ ವೀಕರಣ ಮಾಡುವ ಹಿಂದಿನ ಧರ್ಮ ಮುಂತಾದವುಗಳನ್ನು ಅಂಗೀಕರಿಸಲು ಹೇಗೆ ಅಸಾಧ್ಯವೆಂಬುದರ ಚರ್ಚೆ ಸಾಕಷ್ಟು ಇದೆ. ಅಲ್ಲದೆ ನೀತಿಯೇ ನಿಜ ಮಾನವ ಧರ್ಮ ಮತ್ತು ನೈತಿಕದೃಷ್ಟಿ ಮಾನವನ ಪ್ರಕೃತಿಸಿದ್ಧ ಅರಿವು ಎಂಬ ಪ್ರತಿಪಾದನವು ಈ ಗ್ರಂಥದ ವೈಶಿಷ್ಟ್ಯ.

ಇಂದಿಗನು ಜಗನ್ನಾಗರಿಕ, ಬರಿ ತನ್ನ ತಾಯ್ನಾಡಿನ ಅಭಿಮಾನವುಳ್ಳ ನಾಡಿಗನಲ್ಲ. ಜಗನ್ನಾಗರಿಕನ 'ಜೀವನ ದರ್ಶನ'ವೆ ಈ ಗ್ರಂಥದ ಪ್ರತಿಪಾದ್ಯ ವಿಷಯ. ಮಾನವನು 'ಮನೋದೇಹಿ'. ಅವನ ಶಾರೀರಿಕ ಮತ್ತು ಮಾನಸಿಕ ಅಂಗಗಳ ಸಮತೂಕ ವಿಕಾಸವಾದರೆ ಮಾತ್ರ ಮಾನವೀ ಜೀವನವು ಸರ್ವಾಂಗಸುಂದರವಾಗುವುದು. ಸ್ವಾಯತ್ತ, ಮಾನವೀ ಮನೋ ಭೂಮಿಯಲ್ಲಿ ಸ್ವಯಂಸ್ಫೂರ್ತ ನೈತಿಕದೃಷ್ಟಿ, ತಕ್ಕ ಶಿಕ್ಷಣ ಮತ್ತು ಸಾಮಾ ಜಿಕ ವಾತಾವರಣದಿಂದ ಮಾನವಗೆ ನೀತಿಮತ್ತೆಯನ್ನು ನೀಡುವುದು.

ಇದುವೆ ಮಾನವ ಧರ್ಮ. ಔದಾರ್ಯ, ಕ್ಷಮಾ, ದಯಾ, ತಿತಿಕ್ಷಾ ಮುಂತಾದವುಗಳಿಂದ ಸಮೇತವಾದ ಮಾನವತೆ ಪೂರ್ಣ ವಿಕಾಸಗೊಂಡು ಮಾನವನು ಸಮದರ್ಶಿ ವಿಶ್ವಬಾಂಧವನಾಗುವನು. ಇದುವೆ ನೈತಿಕ ಹೆಗ್ಗುರಿ. ಇದರಲ್ಲಿ ಸ್ವಾರ್ಥಪರಮಾರ್ಥ, ಪ್ರೇಯಸ್ಸು ಶ್ರೇಯಸ್ಸುಗಳ ಸಮನ್ವಯವಿದೆ. ಅವುಗಳ ಪಾರಂಪರಿಕ ವಿರೋಧ ಅವಾಸ್ತವ ಎಂದು ಮುಂತಾದ ಅಭಿನವ ವಿಚಾರಸರಣಿ ಈ ಗ್ರಂಥದಲ್ಲಿ ಕಾಣುವುದು. ಕಾರಣ ಗ್ರಂಥವನ್ನು ತಾಳ್ಮೆ ಯಿಂದ ಓದಬೇಕಾಗಿ ಮನವಿ.

'ಸುನಂದಾ ನಿವಾಸ'
ಹಾವೇರಿ,
ಜನೆವರಿ ೧, ೧೯೫೮.

"ಮರ್ಮಜ್ಞ"

# ಪರಿವಿಡಿ

# ೧. ಎಚ್ಚರ್ನುಡಿ

ಮುಂದುಮತಿಗುಳಿಗಾಲ । ಹಿಂದುಮತಿಗಳಿಗಾಲ ! !
ಹಿಂದಿನಿತಿಹಾಸ ನೀಡುವಾ ಎಚ್ಚರವು
ಇಂದಿನರಿಗಿಂತು ಮರ್ಮಜ್ಞ ॥ ೧ ॥

ಹಿಂದಿನರನಾಳಿದವ । ನಿಂದಿನರು ಆಳುವರು !
ಹಿಂದಿನರ ಅಗ್ನಿದೈವತವು ಸೇವೆಯಲಿ
ಇಂದಿನರ ಮಗ್ನ ಮರ್ಮಜ್ಞ ॥ ೨ ॥

ಬಲಭೀಮನೊಣ ಪೂಜೆ । ಬಲವನ್ನು ನೀಡುವುದೆ ?
ಬಲಬಲ್ಲ ಯಂತ್ರವಿಜ್ಞಾನಿ ಮೀರುವನು
ಬಲಭೀಮಕೋಟಿ ಮರ್ಮಜ್ಞ ॥ ೩ ॥

ಕ್ರಾಂತಿಯಾ ಯುದ್ಧದಲಿ । ಭ್ರಾಂತಿಯಾವಾದವೇ !
ಕ್ರಾಂತಿಯಾ ಸಿಂಹನಾಮುಂದೆ ನಿಲ್ಲುವುದೆ
ಭ್ರಾಂತ ಜಂಬೂಕ ಮರ್ಮಜ್ಞ ॥ ೪ ॥

ಇತಿಹಾಸದಜ್ಞಾನಿ । ಗತಕಾಲದಭಿಮಾನಿ
ದಂತಕತೆ ನಂಬುವಾ ಮೂಢ ಸತ್ತವರೆ
ಉತ್ತಮರು ಎಂಬ ಮರ್ಮಜ್ಞ ॥ ೫ ॥

ವಿಜ್ಞಾನಯುಗದಲ್ಲಿ । ಅಜ್ಞಂಗೆ ಉಳಿವಿಲ್ಲ !
ಯಜ್ಞಗಳ ಸಗ್ಗ ಕನಸಿನ್ದು, ನನಸಿನಾ
ವಿಜ್ಞಾನಸಗ್ಗ ಮರ್ಮಜ್ಞ ॥ ೬ ॥

ಈ ಲೋಕದಾ ಹೇಡಿ । ಆ ಲೋಕಕೋಡುವನು !
ಇಲ್ಲಿನಾ ಕಾಗೆ ಆಗುವುದೆ ಕೋಗಿಲೆಯು
ಆ ಲೋಕದಲ್ಲಿ? ಮರ್ಮಜ್ಞ ॥ ೭ ॥

ನನ್ನ ನಾಡೆನಬೇಡ । ನಿನ್ನನುಡಿ ಎನಬೇಡ
ಬಿನ್ನಣವೆ ನಿನ್ನದಿರುವಾಗ ನಮ್ಮಗಳ
ನನ್ನನಿನ್ನೇಕೆ ಮರ್ಮಜ್ಞ? ॥ ೮ ॥

ಹದ್ದುಗಳು ಹೊಂಚುತಿವೆ । ನಿದ್ದೆಯಿಂದೆದ್ದೇಳಿ ! !
ಯುದ್ಧಬೇಡೆಂದು ಸದ್ದಿಲ್ಲ ಯುದ್ಧಕ್ಕೆ
ಹದ್ದುಗಳು ಸಿದ್ಧ ಮರ್ಮಜ್ಞ ॥ ೯ ॥

ನೀತಿಯಾ ಪಾತದಲಿ । ಘಾತವೇ ಲೋಕದಾ ! !
ಕೋತಿಗಳ ಮೇಲುಗೈಯಾಗೆ ಮತಿವಂತ
ಗತಿಗೇಡಿ ಅಲ್ಲಿ ಮರ್ಮಜ್ಞ ॥ ೧೦ ॥

ಮಾಯೆದೋರದ ತಾಯಿ । ದಯೆದೋರ್ದ ವಿದ್ವಾಂಸ
ಕಾಯದಾರೋಗ್ಯವಿಲ್ಲದವ ಈ ತ್ರಯದ
ಆಯುಸ್ಸು ಹಾಳು ಮರ್ಮಜ್ಞ ॥ ೧೧ ॥

ನೀತಿಯನು ಎತ್ತರಿಸಿ । ಭೀತಿಯನು ಕತ್ತರಿಸಿ
ಪ್ರೀತಿಯನು ಸುತ್ತ ಬಿತ್ತರಿಸಿ ನಲಿವಂಗೆ
ಮತ್ತೆಲ್ಲಿ ಸಗ್ಗ ಮರ್ಮಜ್ಞ ॥ ೧೨ ॥

## ೨. ನನ್ನ ಗುರು, ನನ್ನ ಗುರಿ

ಕನ್ನಡದ ಮೂವಳಿಗೆ । ಮುನ್ನ ಕೀರ್ತಿಯನಿತ್ತ
ನನ್ನ ಗುರು ವಂದ್ಯ ಸರ್ವಜ್ಞ ಕನ್ನಡಿಯೆ
ಕನ್ನಡದ ರನ್ನ ಮರ್ವಜ್ಞ ॥ ೧ ॥

ನನ್ನ ಗುರು ಸರ್ವಜ್ಞ । ನಾನೇನು ಅಜ್ಞನೇ ?
ಎನ್ನ ಗುರುವಿತ್ತ ಸ್ಫೂರ್ತಿಯಾ ಪ್ರತಿಭೆಯಿಂ
ದೆನಗೇನಸಾಧ್ಯ ಮರ್ವಜ್ಞ ? ॥ ೨ ॥

ಕಾಶಿಯಲಿ ಕಲಿತಿಲ್ಲ । ಭಾಷೆಯಲಿ ಪ್ರಭುವಲ್ಲ
ದೇಶದಲಿ ನನ್ನ ಹೆಸರಿಲ್ಲ, ಕೋಶದಾ
ಆಶೆಯೂ ಇಲ್ಲ ಮರ್ವಜ್ಞ ॥ ೩ ॥

ಮತಮೂಢ ಮತಿಯಿಲ್ಲ । ಗತರೂಢ ಗತಿಯಿಲ್ಲ
ಖ್ಯಾತಿಯಲಿ ನನ್ನ ರತಿಯಿಲ್ಲ, ನೀತಿಯಾ
ಪ್ರೀತಿಯೊಂದುಂಟು ಮರ್ವಜ್ಞ ॥ ೪ ॥

ಮಾನವೀ ಧರ್ಮವನು । ಮಾನವೀ ಕುಲಕಾಗಿ
ಮಾನವೀ ದೃಷ್ಟಿ ಬಿಡದಂತೆ ಪೇಳುವೆನು
ಮಾನವನ ಬಂಧು ಮರ್ವಜ್ಞ ॥ ೫ ॥

# ೩. ಮಾನವೀ ಧರ್ಮ

**ತನ್ನಂತೆ ಅನ್ಯರನು । ಮನ್ನಿಸುವ ಧರ್ಮಜ್ಞ**
**ತನ್ನ ಸುಖದುಃಖ ಅನ್ಯರಲಿ ಕಾಣುವುದು**
**ಮಾನವೀ ಧರ್ಮ ಮರ್ಮಜ್ಞ ॥ ೧ ॥**

ಇದುವೆ ಮಾನವನ ಧರ್ಮ, ನಿರಕ್ಷರನಿಗೂ ತಿಳಿಯುವುದು. ಇದರಲ್ಲಿ ಗೂಢವೆಂಬುದೇನಿದೆ? ಆದರೂ ಅನೇಕ ಪಂಡಿತರಿಗೆ ಅದು ಗೂಢವಾಗಿದೆ. ಕ್ಲಿಷ್ಟವಿದ್ದುದನ್ನು ಸ್ಪಷ್ಟ ಮಾಡುವವನೆ ಪಂಡಿತನಲ್ಲನೆ? ಆದರೆ ಪ್ರಾಯಃ ಸ್ಪಷ್ಟವಿದ್ದುದನ್ನು ಕ್ಲಿಷ್ಟಮಾಡುವುದೆ ಪಾಂಡಿತ್ಯದ ವೈಶಿಷ್ಟ್ಯವಾಗಿದೆ!

ಕೋಟಿಪಂಡಿತರನ್ನು ಮಣ್ಣುಮುಕ್ಕಿಸುವ ಪ್ರತಿಭೆಯುಳ್ಳ ಮಹಾಭಾರತಕರ್ತರು ಧರ್ಮರಹಸ್ಯವನ್ನು ಮುತ್ತಿನಂಥ ನಾಲ್ಕು ಶಬ್ದಗಳ ಶ್ಲೋಕಾರ್ಧದಲ್ಲಿ ಹೇಳಿಬಿಟ್ಟಿದ್ದಾರೆ.

**परोपकारः पुण्याय पापाय परपीडनम्**

ಪರೋಪಕಾರದಿಂದ ಪುಣ್ಯ, (ಧರ್ಮ), ಪರಪೀಡನದಿಂದ ಪಾಪ (ಅಧರ್ಮ). ಇದಕ್ಕೂ ತಿಳಿಮಾತಿನಲ್ಲಿ ಧರ್ಮದ ಮರ್ಮವನ್ನು ಹೇಳಿದವರಾರು? ಇದು ಯಾರಿಗೆ ತಾನೇ ತಿಳಿಯದು? ಆದರೂ ಹಲವು ಸಲ ಎಲ್ಲರಿಗೂ ತಿಳಿಯುವುದು ವಿದ್ವಾಂಸರಿಗೆ ತಿಳಿಯದು. ಅತಿ ಪಾಂಡಿತ್ಯಫಲವಾಗಿ ಸುಬೋಧ ಧರ್ಮವು ದುರ್ಬೋಧವಾಯಿತು!

**ಮಾನಸಜ ಸನಾತನ । ಮಾನವೀ ಧರ್ಮವಿದು**
**ಮನಃಸಂಭೂತ ಧರ್ಮದಾ ಪರದತ್ತ**
**ಇನ್ನೇಕೆ ದೀಕ್ಷೆ? ಮರ್ಮಜ್ಞ ॥ ೨ ॥**

ಮಾನವೀ ಧರ್ಮ ಮಾನವೀ ಮನಸಿನಲ್ಲಿಯೆ ಹುಟ್ಟಿದ ನೈತಿಕದೃಷ್ಟಿ. ಇದುಕಾರಣ ಅದು ಸ್ವಭಾವಸಿದ್ಧ. ಸುಡುವುದು ಅಗ್ನಿಯ ಧರ್ಮ. ಸುಡುವ ನಿನ್ನ ಧರ್ಮ ಪಾಲಿಸೆಂದು ಅಗ್ನಿಗಾರು ದೀಕ್ಷೆ ಕೊಡುವರು? ಹಾಗೆಯೆ ಇದು ನ್ಯಾಯ, ಇದು ಅನ್ಯಾಯ ಅದು ತಪ್ಪು, ಅದು ಒಪ್ಪು, ಮುಂತಾದ ವಿವೇಕ ಮಾನವಗೆ ಪ್ರಕೃತಿಸಿದ್ಧ. ಧರ್ಮಪ್ರವೃತ್ತಿ ಮಾನವನ ಪ್ರಕೃತಿ. ನೀತಿಶೀಲತೆ ಅವನ ಸ್ವಭಾವ. ನೀತಿಶೂನ್ಯತೆ ಮಾನವನ ವಿಕೃತಿ.

ಮಾನವನ ಸ್ವಭಾವಸಿದ್ಧ ಈ ನೈತಿಕ ಧರ್ಮ ಸನಾತನ. ಸನಾತನವೆಂದರೆ ಬರಿ ಪ್ರಾಚೀನ, ಪುರಾಣ, ಜೀರ್ಣ, ಬುರುಸುಗಟ್ಟಿದ ಎಂದು ಅರ್ಥವಲ್ಲ. ಸನಾತನ ಎಂದರೆ ಶಾಶ್ವತ, ಸದಾಸರ್ವಕಾಲಕ್ಕೂ ಸತ್ಯವಾದುದು. ವಿವೇಕದಲ್ಲಿ ಮಾನವಗೆ ಆನಂದವಿದೆ. ಅವಿವೇಕದಲ್ಲಿ ವಿಷಾದ. ಏಕೆ? ಅದು ಅವನ ಸ್ವಭಾವ.

ಯಥಾಶಕ್ತಿ ಅವಕಾಶವ್ಯಾಪ್ತಿ ವಾಯುಧರ್ಮ. ಯಥಾಶಕ್ತಿ ಪರೋಪಕಾರ ಮಾನವೀ ಸ್ವಭಾವ ಧರ್ಮ. ಪರೋಪಕಾರಿಯಾಗುವುದು ಮಾನವೀ ಪ್ರಕೃತಿ ಪರಪೀಡಕನಾಗುವುದು ವಿಕೃತಿ. ಇಂತು ನೀತಿಯ ಪ್ರವೃತ್ತಿ ಮಾನವಗೆ ಸ್ವಭಾವಸಿದ್ಧ. ಅದು ಬಹಿರುಪಾಧಿಗಳನ್ನು ಆಶ್ರಯಿಸಿಲ್ಲ. ಪ್ರೀತಿಯೂ ಹಾಗೆಯೆ ಅಂತಃಸ್ಥಿತ ಹೇತುಪ್ರಚೋದಿತ ಅಂತೆಯೇ 'ನಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯನ್ತೆ' ಎಂದು ಮುಂತಾಗಿ ಮಹಾಕವಿ ಭವಭೂತಿ ಹೇಳುವನು. ಪ್ರಕೃತಿಸಿದ್ಧ ಧರ್ಮಕ್ಕೆ ಪರರು ನೀಡುವ ದೀಕ್ಷಾದಿ ಉಪಾಧಿಗಳು ನಿರರ್ಥಕ. ದೀಕ್ಷೆ ದೀಕ್ಷಿತರ ನಾಟಕ ಅನಾವಶ್ಯಕ.

**ಮಾನವನ ಸ್ವಾಯತ್ತ । ಸನಾತನ ಧರ್ಮವಿದು**
**ಮಾನವತೆ ಪೂರ್ಣದಾ ಮೊಗ್ಗೆ, ಅರಳುತಾ**
**ಮಾನವನು ಪೂರ್ಣ ಮರ್ಮಜ್ಞ ॥ ೩ ॥**

ಸ್ವಭಾವಸಿದ್ಧ ಧರ್ಮವು ಅನುಭವಸಿದ್ಧ, ಸ್ವಯಂಸಿದ್ಧ. ಅದರ ಸಿದ್ಧಿಗೆ ಶಬ್ದ, ಅನುಮಾನಾದಿ ಪ್ರಮಾಣಗಳು ಬೇಕಿಲ್ಲ. ಧರ್ಮದ ಈ ನಿಜ ಸ್ವರೂಪವು ಮಾನವಕುಲದ ಬಾಲ್ಯದಲ್ಲಿ, ಪ್ರಾಚೀನ ಕಾಲದಲ್ಲಿ ಗೊತ್ತಿರಲಿಲ್ಲ. ಸ್ವಾಯತ್ತ ಧರ್ಮ ಪರಾಯತ್ತವೆಂದು ಬಗೆದು ಅದನ್ನೆತ್ತಿ ಹಿಡಿಯಲು ಆಯಾ ಕಾಲದಲ್ಲಿ ರೂಢವಾದ ದೇವದಾನವರ ಮತ್ತು ಸುಖಪ್ರಾಪ್ತಿಗೂ ದುಃಖ ನಿವಾರಣಕ್ಕೂ ಅವಶ್ಯವೆಂದೆನಿಸಿದ ಕರ್ಮಕಾಂಡದ ಉಪಾಧಿಗಳು ಧರ್ಮಾಚಾರದ ಉಪಕರಣಗಳಾಗುತ್ತ ಬಂದವು. ಕರ್ಮಕಾಂಡದ ಆಡಂಬರದಲ್ಲಿ ಧರ್ಮದ ಸುಬೋಧ ಜ್ಞಾನಕಾಂಡವು ಕಣ್ಮರೆಯಾಗಿ, ಧರ್ಮದ ಕೇಂದ್ರವು ನೀತಿಮತ್ತೆಯನ್ನು ಬಿಟ್ಟು ಕರ್ಮಠರ ಜಟಿಲ, ಗೂಢ ಕಾಮ್ಯವ್ರತಗಳಲ್ಲಿ ತಳ ವೂರಿತು. ಧಾರ್ಮಿಕತೆ ನೀತಿವಂತರ ಸದಾಚಾರದಲ್ಲಿ ಕಾಣದೆ ಮೂಢ ಭಾವಿಕರಿಗೆ ಅದು ಕರ್ಮಠರ ಧರ್ಮದ ಅದ್ಭುತರಮ್ಯ ನಾಟ್ಯಪೂರ್ಣ ಹುಡುಗಾಟದಲ್ಲಿ ಕಾಣಲಣಿಯಾಯಿತು.

ಪ್ರಪಂಚದ ಎಲ್ಲ ಭಾಗಗಳಲ್ಲಿ ಜಿಜ್ಞಾಸುಗಳ ಜ್ಞಾನಕಾಂಡಕ್ಕೂ, ರೂಢಿ ಮೂಢರ ಕರ್ಮಕಾಂಡಕ್ಕೂ ಎಂದಿಗೂ ತಿಕ್ಕಾಟ ತಪ್ಪಿಲ್ಲ, ದೇವರು ಮಾನವ ನನ್ನು ತನ್ನ ಪ್ರತಿಬಿಂಬವನ್ನಾಗಿ ನಿರ್ಮಿಸಿದನೆಂಬ ಭಾವಿಕರ ನಂಬುಗೆ ತರ್ಕಾ ತೀತ, ವಿವಾದ್ಯ. ಆದರೆ ತನ್ನ ಸಾಂಸ್ಕೃತಿಕ ಮಟ್ಟಕ್ಕನುಗುಣವಾಗಿ ಮಾನವನು ದೇವದಾನವರನ್ನು ತನ್ನ ಪ್ರತಿಬಿಂಬವನ್ನಾಗಿ ನಿರ್ಮಿಸುತ್ತ ಬಂದ ಮಾತು ಇತಿಹಾಸಸಂಮತ ನಿರ್ವಿವಾದ ವಾಸ್ತವತೆ.

ಜಿಜ್ಞಾಸುಗಳು ಧರ್ಮವನ್ನು ಸುಬೋಧಮಾಡಲೆತ್ನಿಸಿದರು. ರೂಢಿ ಮೂಢ ಕರ್ಮಠ ಭಾವಿಕರು ಧರ್ಮವನ್ನು ಗೂಢ, ದುರ್ಬೋಧ, ಪರಾಯತ್ತಮಾಡಿ ನೀತಿಯಿಂದ ಅದನ್ನು ತಿಳಿಯದೆ ಅಗಲಿಸಿದರು.

ಎಲ್ಲರಿಗು ಎಂದಿಗೂ । ಸಲ್ಲುವಾ ಧರ್ಮವಿದು
ಇಲ್ಲ ಕುಲವರ್ಣ ಮೇಲಾಟ, ನೀತಿಗೇ
ಇಲ್ಲಿ ಪ್ರಾಧಾನ್ಯ ಮರ್ಮಜ್ಞ ॥ ೪ ॥

ಶುದ್ಧ ಹೃದಯುದ ಸೊತ್ತು । ಬುದ್ಧಿಮಂತಗೆ ಗೊತ್ತು
ಬದ್ಧನೂ ಮುಕ್ತ ಹೃದಯುದಾ ಶುದ್ಧಿಯಿಂ
ಶುದ್ಧನೇ ಬುದ್ಧ ಮರ್ಮಜ್ಞ ॥ ೫ ॥

ಹೀನ ನಾನೆನಬೇಡ । ಹೀನರಾರವರಿಲ್ಲಿ?
ನೀನಲ್ತೆ ಪೂರ್ಣದಾ ಬೀಜ? ಯತ್ನದಿಂ
ದೇನಾಗಲಾರೆ? ಮರ್ಮಜ್ಞ ॥ ೬ ॥

ಭೂತದಯೆ ಇಲ್ಲದಾ । ಎತ್ತಣದ ಧರ್ಮವದು?
ಭೂತಗಣ ಪ್ರೀತಿಸದ ಹೊಲ್ಲ ಬಲ್ಲನೇ
ನೀತಿಯಾ ಕರ್ಮ? ಮರ್ಮಜ್ಞ ॥ ೭ ॥

ರೂಢಿಯಾ ಕಡಿವಾಣ । ಮೂಢನಾ ಬಡಿವಾರ!
ರೂಢಿಗೇ ಹಾಕಿ ಕಡಿವಾಣ ಪ್ರಜ್ಞಾನಿ
ರೂಢಿಗಧಿರಾಜ ಮರ್ಮಜ್ಞ ॥ ೮ ॥

ರೂಢಿಮೂಢ ಭಾವಿಕತನವು ಕರ್ತೃತ್ವಶೂನ್ಯ ನಿರಾಶಾವಾದ, ಪರಲೋಕ ವಾದ ಮುಂತಾದವುಗಳ ತಾಯಿ. ಇವೆಲ್ಲ ವಾದಗಳು ಪಲಾಯನವಾದದ (Escapism) ಮತ್ತು ಪರಾಭವಭ್ರಾಂತಿಯ (Defeatism) ಪರ್ಯಾಯಗಳು.

ಅದು ಮಾಯೆ ಇದು ಮೋಹ । ಅದು ಟೊಳ್ಳು ಇದು ಜೊಳ್ಳು
ಇದು ಸಾಕು ಗೋಳಿನಾ ರಗಳೆ, ಮೋದದಾ
ವಾದ್ಯಗಳನೂದು ಮರ್ಮಜ್ಞ ॥ ೯ ॥

ಬೆನ್ನಟ್ಟಿ ದೇವನಾ । ದೀನ ತಾ ಗತಿಗೆಟ್ಟ
ದೀನಸಖನುಂಟೆ ಆ ದೇವ? ತನ್ನಿಂದ
ತನ್ನ ಉದ್ಧಾರ ಮರ್ಮಜ್ಞ ॥ ೧೦ ॥

ಮೂಢ ಭಾವಿಕರೇಳ್ಗೆ । ಗೂಢವಾದದ ಆಳ್ಕೆ
ರೂಢಿಯಾ ಬೀಡು, ಕರ್ಮಠರ ಕಾಟದಿಂ
ನಾಡು ಸುಡುಗಾಡು ಮರ್ಮಜ್ಞ ॥ ೧೧ ॥

ಧರ್ಮದಾ ನೆಪದಿಂದ । ಧರ್ಮದಾ ಹುಡುಗಾಟ !
ಕರ್ಮಠರ ಕರ್ಮದಲಿ ಎಲ್ಲದೂ ಉಂಟು
ಧರ್ಮವನು ಬಿಟ್ಟು ಮರ್ಮಜ್ಞ ! ॥ ೧೨ ॥

ಧರ್ಮಸಖ ಕಾರ್ಮಿಕನು । ಧರ್ಮರಿಪು ಕರ್ಮಠನು
ಕಾರ್ಮಿಕನು ಧರ್ಮದಿಂ ತಿಂಬ, ಕರ್ಮಠನು
ಧರ್ಮವನೆ ತಿಂಬ ಮರ್ಮಜ್ಞ! ॥ ೧೩ ॥

ನಿರಾಶಾವಾದೀ ಈಶವಾದ ಪರಲೋಕವಾದೀ ಉಪಾಧಿಗಳಿಂದ ಮಾನವನ ಧಾರ್ಮಿಕ ಸ್ವಾಯತ್ತತೆ ಲೋಪಹೊಂದುತ್ತದೆ.

ಸುತ್ತಬೇಡ ದೇವನ । ಸುತ್ತ ನೋಡು ಜೀವನ
ಹತ್ತಿರಿಸು ಪ್ರಾಣಿಗಣವನ್ನ, ದೇವನಾ
ಮುತ್ತುವುದು ವ್ಯರ್ಥ ಮರ್ಮಜ್ಞ ॥ ೧೪ ॥

ಆ ಲೋಕದಾರಾಯು । ಈ ಲೋಕದಲಿ ಮಾಯು
ಆ ಲೋಕನಾಥ ಸ್ವರ್ಗಸ್ಥ ಈ ಲೋಕ
ವೆಲ್ಲ ಸ್ವಾಯತ್ತ ಮರ್ಮಜ್ಞ! ॥ ೧೫ ॥

ಕರ್ಮಕ್ಷೇತ್ರವು ಇತ್ತ । ಧರ್ಮಕ್ಷೇತ್ರವು ಅತ್ತ !
ಕರ್ಮದಲಿ ಧರ್ಮ ಬಾರದಿರೆ ಧಾರಣಾ
ಧರ್ಮದಾ ಲೋಪ ಮರ್ಮಜ್ಞ ॥ ೧೬ ॥

ಸಾಂಪ್ರದಾಯಿಕರಲ್ಲಿ ಧರ್ಮಾಚರಣದ ಬಗೆಗೆ ಅತ್ಯಂತ ವಿಚಿತ್ರ ಕಲ್ಪನೆ ರೂಢವಾಗಿದೆ. ಪ್ರಪಂಚದ ಎಲ್ಲ ಸಮಾಜಗಳಲ್ಲಿ ಈ ತಪ್ಪು ತಿಳಿವಳಿಕೆ ಶಿಷ್ಟ ಸಂಮತವಾಗಿದೆ. ಈ ಪ್ರಮಾದಪೂರ್ಣ, ಸದೋಷದೃಷ್ಟಿಯೆ ಧರ್ಮ ಗ್ಲಾನಿಯ ಮೂಲ. ಈ ವಿಪರೀತ ಕಲ್ಪನೆಯಿಂದ ಧರ್ಮವು ನೀತಿಶೂನ್ಯವಾಗಿ ಅಧರ್ಮವಾಗುತ್ತದೆ. ಕರ್ಮಠರು ಎಂದಿಗೂ ತಿಳಿದು ಮತ್ತು ತಿಳಿಯದೆ ಕಾಮ್ಯವ್ರತಗಳನ್ನೆತ್ತಿಹಿಡಿದು ಅಧರ್ಮವನ್ನು ಹೆಚ್ಚಿಸುತ್ತ ಬಂದಿದ್ದಾರೆ. ಸಾಧುಸಂತರೂ ಧರ್ಮಸುಧಾರಕರೂ ಎಲ್ಲ ಕಾಲಗಳಲ್ಲಿ ಕರ್ಮಠ ಧರ್ಮ ನಿಷ್ಠ ಧರ್ಮರಿಪುಗಳನ್ನು ಕಟುವಾಗಿ ಟೀಕಿಸಿದ್ದುಂಟು.

ಧರ್ಮಪ್ರವೃತ್ತಿ ಅಥವಾ ನೀತಿಶೀಲತೆ ಮಾನವನ ಸ್ವಾಭಾವಿಕ ಪ್ರವೃತ್ತಿ. ಅದು ಅವನ ಪ್ರಕೃತಿ. ಈ ವಾಸ್ತವತೆಯನ್ನು ಕಂಡು ಹಿಡಿಯದ ಪಂಡಿತರು ಧರ್ಮದ ಮೇಲೆ ದೇವರು, ಸ್ವರ್ಗ, ನರಕ, ಮತ್ತು ಅವುಗಳನ್ನು ಪಡೆಯಲು ಇಲ್ಲವೆ ತಪ್ಪಿಸಲು ಕಲ್ಪಿಸಿದ ನಾನಾ ಉಪಾಸನೆಗಳ, ಕಾಮ್ಯವ್ರತಗಳ ಆವರಣ ಗಳನ್ನು ಹೇರಿ ಧರ್ಮವನ್ನು ಗೂಢೀಕರಿಸಿದರು.

ಸ್ವಾಭಾವಿಕವಾಗಿ ಮಾನವನು ಪುಣ್ಯಾತ್ಮನೆ! ವಿಶಿಷ್ಟ ಸಂದರ್ಭದಲ್ಲಿಯೆ ಅವನು ಪಾಪದತ್ತ ಪ್ರವೃತ್ತನಾಗುವನು. ಲೋಭವೆ ಪಾಪದ ಕಾರಣವೆಂದು ಗೀತಾಕಾರರು ಹೇಳುವ ಮಾತಿನಲ್ಲಿ ಲೋಭರಹಿತ ಸಾಮಾನ್ಯ ಮಾನವನು ಪುಣ್ಯಶೀಲ, ನೀತಿವಂತ ಎಂಬುದು ಧ್ವನಿತವಾಗಿದೆ. ಸ್ವಭಾವತಃ ಮಾನವನು ಸತ್ಯವಾದಿ. ಸುಳ್ಳು ಹೇಳುವಲ್ಲಿ ಯಾರಿಗೂ ಆನಂದವಿಲ್ಲ. "ಸತ್ಯವಾದಿ ಯಾಗು ಅದು ಧರ್ಮದ ಆದೇಶ, ಸತ್ಯವಂತಗೆ ಸ್ವರ್ಗ. ಸುಳ್ಳನಿಗೆ ನರಕ" ಹೀಗೆ ಮಾಡುವ ಉಪದೇಶ ವಿಘಾತಕ ಇಲ್ಲಿ ಆದೇಶ, ಸ್ವರ್ಗ ಮತ್ತು ನರಕ ಎಂಬ ಕಲ್ಪಿತ, ಆಗಂತುಕ ಉಪಾಧಿಗಳು ಬಂದಿವೆ. ಅಜ್ಞನು ಕೆಲಕಾಲ ಸ್ವರ್ಗಲೋಭದಿಂದ ಮತ್ತು ನರಕಭಯದಿಂದ ನೀತಿವಂತನಾಗಬಹುದು, ಆದರೆ ಅವನು ಪ್ರಬುದ್ಧನಾದೊಡನೆ ಈ ಧರ್ಮನಿಷ್ಠೆಯನ್ನೆತ್ತಿ ಹಿಡಿವ ಸ್ವರ್ಗ ನರಕ ದೇವದಾನವಾದಿ ಸಂಗತಿಗಳು ಕಾಲ್ಪನಿಕ ವಿವಾದ್ಯ ಸಂಗತಿಗಳೆಂದು ಕಂಡು ಬಂದು ಅವನ ನೀತಿಮತ್ತೆಯ ಜೊಳ್ಳು ತಳಹದಿ ನೀರ್ಗುಳ್ಳೆಯಂತೆ ಒಡೆದು ಹೋಗುವುದು. ನೀತಿಯು ಸ್ವಾಭಾವಿಕ ವಾಸ್ತವ ಆಧಾರವೆ ಅವನಲ್ಲಿ ಇಲ್ಲದ ಕಾರಣ (ಅವನ ಅಂಧಶ್ರದ್ಧ ಗುರುಹಿರಿಯರ ಸದೋಷ ಉಪದೇಶ ದಿಂದ) ಅವನು ನೀತಿಭ್ರಷ್ಟ ಇಲ್ಲವೆ ಮಿಥ್ಯಾಚಾರಿಯಾಗುವನು.

ನೈತಿಕ ಧರ್ಮದ ಸ್ವಾಭಾವಿಕ ಸ್ವರೂಪ ಗೊತ್ತಿಲ್ಲದವರೆ ಗುಡಿಯಲ್ಲಿ ಅರ್ಚಕರು, ಗುಡಿಹೊರಗೆ ವಂಚಕರು, ಜಪಮಾಡುವಾಗ ಧಾರ್ಮಿಕ, ಕಾಯಕದಲ್ಲಿ ನೀತಿಶೂನ್ಯ ಹೀಗೆ ಧರ್ಮ ಮತ್ತು ಕರ್ಮ (ಕಾಯಕ, ವ್ಯವಹಾರ) ಇವುಗಳ ಬೇರ್ಗಡೆಮಾಡಿ ಧರ್ಮನಿಷ್ಠ ಧರ್ಮಶೂನ್ಯರಾಗುವರು. ಮೂಢಭಾವಿಕರ ದೇವ ನಿಜಕ್ಕೂ ಸ್ವರ್ಗಸ್ಥ. ಅವರ ಭಾವಿಕತೆಯ ಜ್ವರ ಇಳಿದ ಮೇಲೆ ಅವರ ದೇವ ಭಿನ್ನಾರ್ಥದಲ್ಲಿ ಸ್ವರ್ಗಸ್ಥ! ಅವರ ಸ್ವರ್ಗದ ರಾಯ ಮಾಯವಾದೊಡನೆ ಅವರ ಧಾರ್ಮಿಕತೆ, ನೀತಿಮತ್ತೆ ಇವೆಲ್ಲ ಮಾಯವಾಗುವುದು ಕ್ರಮಪ್ರಾಪ್ತವೆ.

**ಕಾರಣದಿ ನೀತಿಯಾ । ಧಾರಣಾ ಧರ್ಮದಾ**
**ನೈರಾಶ್ಯವಾದ ಇಹಲೋಕ ವಿಘಾತಕ**
**ಧಾರಣಾಶೂನ್ಯ ಮರ್ಮಜ್ಞ** ॥ ೧೭ ॥

**ನೀತಿಯಾ ಧರ್ಮದಲಿ । ಪ್ರೀತಿಯಾ ಹೆದ್ದಾರಿ**
**ಭೀತರಾ ಲೋಭಿಗಳ ರೂಢ ಧರ್ಮದಲಿ**
**ನೀತಿಗಿಂಬಿಲ್ಲ ಮರ್ಮಜ್ಞ** ॥ ೧೮ ॥

**ತನ್ನ ಗುರು ತನ್ನಲ್ಲಿ । ಇನ್ನೆತ್ತ ಗುರು ಮತ್ತೆ?**
**ತನ್ನರಿವೆ ತನ್ನ ಗುರುವಾಗೆ ಗುರುಶೋಧ**
**ಇನ್ನೇಕೆ ವ್ಯರ್ಥ ! ಮರ್ಮಜ್ಞ** ॥ ೧೯ ॥

ರೂಢಿಮೂಢರ ಗೂಢಧರ್ಮದ ನೈರಾಶ್ಯನಿರ್ಮಿತ ಆಗಂತುಕ ಉಪಾಧಿಗಳನ್ನು ಕತ್ತರಿಸಿದೊಡೆ ಚೊಕ್ಕ ಚಿನ್ನದಂದದಿ ನೀತಿಮತ್ತೆಯೊಂದೇ ಉಳಿಯುವುದು. ಆಗ ನೀತಿ ಮತ್ತು ಧರ್ಮ ಇವುಗಳ ಸಮೀಕರಣವಾಗುವುದು. ಇದುವೆ ಮಾನವನ ನಿತ್ಯ, ಸತ್ಯ, ಶುದ್ಧ, ಸರ್ವಸಂಮತ, ಸ್ವಾಯತ್ತ ಸ್ವಾಭಾವಿಕ ಸಾರ್ವತ್ರಿಕ, ಸನಾತನ, ಸುಬೋಧ ನೈತಿಕ ಧರ್ಮ.

# ೪. ನೀತಿಮತ್ತೆ ಮತ್ತು ನೈತಿಕ ಗುರಿ

ಮಾನವೀ ಧರ್ಮ ಮತ್ತು ನೀತಿಮತ್ತೆ ಸಮೀಕರಿಸಲಾಗಿದ್ದು ಇನ್ನು ನೀತಿಯ ಸ್ವರೂಪ ಮತ್ತು ಗುರಿ ಇವುಗಳ ಜಿಜ್ಞಾಸೆ:—

**ರೀತಿಯೋ ಶೀಲದಾ । ನೀತಿಯೆಂದರಿಯಣ್ಣ**
**ನಿತ್ಯ ಸ್ವಾಯತ್ತ ಮಾನವೀ ಪ್ರಕೃತಿಯು**
**ಪ್ರೀತಿಯಾ ಸೊತ್ತು ಮರ್ಮಜ್ಞ** ॥ ೧ ॥

**ಪ್ರಕೃತಿ ಸದಾಚಾರ । ವಿಕೃತಿ ದುರಾಚಾರ**
**ಸಂಸ್ಕೃತಿಯ ಪ್ರಾಣ ನೀತಿಯೋ, ಧಾರಣೆಯು**
**ವಿಕ್ರಮದ ಅಸ್ತ್ರ ಮರ್ಮಜ್ಞ** ॥ ೨ ॥

**ಐತಿಹ್ಯಸಂಮತವೆ । ನೀತಿಯಾ ಪ್ರಾಧಾನ್ಯ**
**ನೀತಿಯಾ ಕಟ್ಟು ಸಡಿಲಾಗೆ ಬಾಳಿನಾ**
**ರೀತಿಗೇ ನಷ್ಟ ಮರ್ಮಜ್ಞ** ॥ ೩ ॥

**ಎಲ್ಲರಿಗು ಹಿತಕಾರಿ । ಎಲ್ಲಿಯೂ ವ್ಯವಹಾರ್ಯ**
**ಬಲ್ಲವರ ಇಂತು ನೀತಿಯಾ ಲಕ್ಷಣವು**
**ಎಲ್ಲಿಯೂ ಮಾನ್ಯ ಮರ್ಮಜ್ಞ** ॥ ೪ ॥

ನೈತಿಕ ತತ್ವವನ್ನು ಕಂಡು ಹಿಡಿಯಲು ಬಲ್ಲವರು ಒಂದು ಸ್ಪಷ್ಟ ಗುರ್ತು ಹೇಳಿದ್ದಾರೆ. ಯಾವುದನ್ನು ಬಳಸಿದರೆ ಎಲ್ಲರ ಹಿತವಾಗುವುದೊ, ಯಾವುದನ್ನು ಎಲ್ಲರೂ ವ್ಯವಹರಿಸಬಹುದೊ, ಯಾವುದು ವ್ಯವಹಾರಕ್ಕೆ ಸಾಧಕ ಮತ್ತು ಪೋಷಕವಾಗುವುದೊ ಅದು ನೈತಿಕ ನಿಯಮ (A law Universal) ಆಗುವುದು. ಸಾರ್ವತ್ರಿಕ ವ್ಯವಹಾರ್ಯತೆ, ಸರ್ವಸುಖ ಹಿತಕಾರಕತೆ ನೀತಿಯ ಹೆಗ್ಗುರ್ತು, ಹೆಗ್ಗುರಿ. ಸುಳ್ಳು ಹೇಳುವುದು ನೀತಿಯಲ್ಲ. ಎಲ್ಲರೂ ಸುಳ್ಳು ಹೇಳತೊಡಗಿದರೆ ಸಾರ್ವತ್ರಿಕ ಅವಿಶ್ವಾಸ, ಅಪನಂಬುಗೆ ಉಂಟಾಗಿ ಲೋಕವ್ಯವಹಾರ ನಿಂತುಬಿಡುವುದು. ಆದರೆ ಸತ್ಯವನ್ನು ಎಲ್ಲರೂ ಆಡಬಹುದು. ಸತ್ಯದಿಂದ ವ್ಯವಹಾರ ಮತ್ತಷ್ಟು ಸರಳವಾಗಿ ಸಾಗಿ ಅದರಿಂದ ಎಲ್ಲರಿಗೂ ಸುಖವುಂಟು, ಹಿತವುಂಟು. ಅಂತೆಯೆ ಸತ್ಯವಾದಿತ್ವ ನೈತಿಕ ನಿಯಮವು. ಸುಳ್ಳುತನ ನೀತಿನಿಯಮವಾಗಲಾರದು. ಸುಳ್ಳನು ಲೋಭ

ದಿಂದ ಸುಳ್ಳನಾಗುವನು. ಅಜ್ಞಾನದಿಂದಲೂ ಸುಳ್ಳಾಡಬಹುದು. ಆದರೆ ಪ್ರಾಯಃ ಅವನು ಸತ್ಯವಂತನೆ. ಅದು ಅವನ ಪ್ರಕೃತಿ. ಸುಳ್ಳು ಅವನ ಸ್ವಭಾವವಿರುದ್ಧವಾದುದು–ವಿಕೃತಿ.

ಸುಳ್ಳನೇ ಹೇಳಿದಡೆ । ತಾಳುವುದೆ ಬಾಳೆಮ್ಮ ?
ಕಳ್ಳರೇ ಸುತ್ತ ದಳ್ಳಿದಡೆ ಒಕ್ಕಲಿಗ
ಬೆಳೆವನೇ ಕಾಳು ಮುರ್ಮುಜ್ಞ? ॥ ೫ ॥

ಕಳ್ಳಸುಳ್ಳರ ಬಾಳು । ತಾಳಿದೆಯೆ ಚಿರಕಾಲ ?
ತಾಳಿಕೆಗೆ ಬೇಕು ನೀತಿಯೇ, ಇದಕುಂಟು
ಕಳ್ಳರೇ ಸಾಕ್ಷಿ ಮುರ್ಮುಜ್ಞ! ॥ ೬ ॥

ಕಳ್ಳಕಾಕರ ಕೂಟ । ಕೂಳಜಾರರ ತಂಡ
ತಾಳದೇ ಹಾಳು ಆದುದನಕೂಳರೇ
ಹೇಳುವರು ನಿತ್ಯ ಮುರ್ಮುಜ್ಞ ॥ ೭ ॥

ಕಳ್ಳಕಳ್ಳಗೆ ವೈರಿ । ಸುಳ್ಳ ಸುಳ್ಳಗೆ ಶೂಲ
ಮುಳ್ಳನಾಮುಳ್ಳು ಮುರಿವಂತೆ ಕಳ್ಳನಾ
ಕಳ್ಳನಿಂದಂತ ಮುರ್ಮುಜ್ಞ ॥ ೮ ॥

ಕಳ್ಳಸುಳ್ಳರು ಒಬ್ಬರೊಬ್ಬರಿಗೆ ಮಾರಕರು. ಆದರೆ ನೀತಿವಂತರು ಒಬ್ಬರೊಬ್ಬರಿಗೆ ತಾರಕರು, ಸಹಕಾರಿ.

ಅನೀತಿಯಲ್ಲಿ ಧಾರಣಾಶಕ್ತಿಯಿಲ್ಲ. ಇದನ್ನು ಲೋಕ ವ್ಯವಹಾರವೆ ಸಿದ್ಧಮಾಡುತ್ತದೆ, ಇನ್ನು ನೀತಿಯ ಧಾರಣಾಶಕ್ತಿ ನೋಡಿ.

ಸತ್ಯ ಸತ್ಯವನೆತ್ತಿ । ಮುತ್ತಷ್ಟು ಸ್ಥಿರವಾಗಿ
ನಿತ್ಯ ನವಭಾಸ್ಕರನಂದದಿ ಬೀರುವುದು
ನೀತಿಯಾಕಾಂತಿ ಮುರ್ಮುಜ್ಞ ॥ ೯ ॥

ನಿತ್ಯ ಸ್ವಾಯತ್ತವೀ । ನೀತಿಮುತ್ತೆಯ ಬಾಳು
ನೀತಿಯಾ ತ್ಯಾಗಮಾಡುವವ ಕಾಣುವನೆ
ಶಾಂತಿಯಾ ಲೇಶ ಮುರ್ಮುಜ್ಞ ? ॥ ೧೦ ॥

ಸತ್ತರೂ ಇದ್ದಂತೆ । ಸೋತರೂ ಗೆದ್ದಂತೆ
ಅತ್ತರೂ ಮುತ್ತು ಸುರಿದಂತೆ, ಸಜ್ಜನರ
ಹೆತ್ತವರು ಧನ್ಯ ಮುರ್ಮುಜ್ಞ ॥ ೧೧ ॥

ಮೃತರಾದರೂ ಸಂತರು ಅಮೃತರಾದರೆ ದುರುಳರು ಬಾಳಿದರೂ ಅಳಿದಂತೆ ಹೇಗೆಂಬುದನ್ನು ನೋಡಿ.

**ಇದ್ದರೂ ಸತ್ತಂತೆ । ಗೆದ್ದರೂ ಬಿದ್ದಂತೆ**
**ತಿಂದರೂ ತಿಂದೆವೆನಲಾರ್ದ ದುರ್ಜನರ**
**ಸುದ್ದಿ ನಮಗೇಕೆ ಮರ್ಮಜ್ಞ!** ॥ ೧೨ ॥

**ಸತ್ಯ ನ್ಯಾಯ ದಯಾದಿ । ನೀತಿಯಾ ಸಂತಾನ**
**ನೀತಿಯಿಂದಿನ್ನು ಧರ್ಮವಾವುದು ಮತ್ತೆ ?**
**ನೀತಿಯೇ ಧರ್ಮ ಮರ್ಮಜ್ಞ** ॥ ೧೩ ॥

ಧಾರಣಾಶಕ್ತಿ ನೀತಿಯಲ್ಲಿಯೇ ಇರುವ ಕಾರಣ ಅದುವೆ ಮಾನವೀ ಧರ್ಮ. ಇದು ಪ್ರಕೃತಿಸಿದ್ಧ ಸನಾತನ.

**ನೀಲ ಹೋದಡೆ ಮತ್ತೆ । ನೀಲ ನಾ ತರಬಲ್ಲೆ**
**ಶೀಲವೇ ಹೋಗೆ ಎತ್ತಣದಿ ತರುವೆ ನಾ !**
**ಶೀಲ ಮತ್ತೊಂದು ಮರ್ಮಜ್ಞ** ॥ ೧೪ ॥

**ನೀತಿ ಮತ್ತೆಯ ಸೊತ್ತು । ಹೊತ್ತ ಕಳ್ಳನು ಎತ್ತ ?**
**ನೀತಿಯನೆ ಬಿಟ್ಟವನ ವಿತ್ತಕಳ್ಳರಾ**
**ಸುತ್ತಲಿನ ಸೊತ್ತು ಮರ್ಮಜ್ಞ!** ॥ ೧೫ ॥

## ನೈತಿಕ ಹೆಗ್ಗುರಿ

ಸಾಂಪ್ರದಾಯಿಕ ಹೆಗ್ಗುರಿ ವೈಯಕ್ತಿಕ ಮುಕ್ತಿ. ಸಮಾಜವು ಉಳಿಯಲಿ, ಅಳಿಯಲಿ, ತಾನೊಬ್ಬ ಮುಕ್ತನಾದರಾಯ್ತು ಸಾಂಪ್ರದಾಯಿಕ ಧರ್ಮನಿಷ್ಠನ ಪುರುಷಾರ್ಥಸಿದ್ಧಿ. ಸಾಂಪ್ರದಾಯಿಕ ಹೆಗ್ಗುರಿ ನೈರಾಶ್ಯವಾದೀ, ಪಾರ. ಲೌಕಿಕ, ಅಸಾಮಾಜಿಕ, ನರಲೋಕವಿಘಾತಕ. ಈ ಲೋಕದ ಬಾಳು ಹಾಳು. ಈ ದೇಹ ಮಾನವೀ ಆತ್ಮನ ಸೆರೆಮನೆ, ಕಲ್ಪಿತ ಸ್ವರ್ಗಸ್ಥ ಪರಲೋಕನಾಥನ ಕಲ್ಪಿತ ಕೃಪೆಯಿಂದ, ಕಲ್ಪಿತ ದೇಹಬಂಧನದಿಂದ ಬಿಡುಗಡೆ ಹೊಂದಿ, ಕಲ್ಪಿತ ಸಾಯುಜ್ಯ ಮುಕ್ತಿಯನ್ನೂ, ಕೈವಲ್ಯವನ್ನೂ, ನಿರ್ವಾಣವನ್ನೂ ಗಳಿಸುವುದೇ ಕಲ್ಪಿತ ಪರಮಾರ್ಥ. ಈ ಲೋಕದಲ್ಲಿ ಸಾಂಪ್ರದಾಯಿಕರು ಪರಲೋಕದಿಂದ ಪತಿತರಾಗಿ ಬಂದು, ಪರಲೋಕನಾಥನ ಪ್ರಸಾದದಿಂದ ಪಾಪಕ್ಷಾಲನಕ್ಕಾಗಿ ಆದಿಷ್ಟ ಕರ್ಮಗಳನ್ನು ಮಾಡಿ, ಈ ಲೋಕದ ಬಗೆಗೆ ಆಸ್ಥೆ ವಹಿಸದೆ, ಇದು ಕೇವಲ ಧರ್ಮಶಾಲೆ ಎಂದು ತಿಳಿದು

ಇಲ್ಲಿ ತಾತ್ಪೂರ್ತಿಕವಾಗಿ ತಂಗಿದ ಪಂಚಮಸ್ತಂಭೀಯರು! (Fifth Colum-nists). ಇಂತು ಮುಂತಾಗಿ ಪರಲೋಕವಾದಿ ನೈರಾಶ್ಯವಾದಿಗಳನ್ನು ಈ ಲೋಕದಲ್ಲಿ ಆಸ್ಥೆಯುಳ್ಳ ಆಶಾವಾದಿಗಳು ಟೀಕಿಸಬಹುದಾಗಿದೆ.

ಇನ್ನು ಮಾನವನ ನೈತಿಕ ಹೆಗ್ಗುರಿ ಸ್ಪಷ್ಟವಾದುದಾಗಿದೆ. ಮಾನವನು ಮಾನವತೆಯ ಎಲ್ಲ ಅಂಗಗಳ ವಿಕಾಸಮಾಡುತ್ತ ಎಲ್ಲ ಕ್ಷೇತ್ರಗಳಲ್ಲಿ ಯಥಾಶಕ್ಯ ಪ್ರಗತಿಮಾಡಿ ಮಾನವನು ಮಾನವ ಕುಲದ ಮತ್ತು ವ್ಯಕ್ತಿಶಃ ತನ್ನ ಸರ್ವಾಂಗಸುಂದರ ಪೂರ್ಣ ಮಾನವತೆಗಾಗಿ ಯತ್ನಿಸುವನು. ನೀತಿಯ ಮಾರ್ಗದರ್ಶನದಲ್ಲಿ, ಬುದ್ಧಿಯ ಬೆಳಕಿನಲ್ಲಿ, ವಿಜ್ಞಾನಬಲದಿಂದ ವಿಶ್ವಬಾಂಧವ್ಯದ ಅಮೃತದಿಂದ ಮಾನವತೆಯ ಪೂರ್ಣತೆಯನ್ನು ಕಂಡು ಈ ಲೋಕದಲ್ಲಿಯೇ ಸ್ವರ್ಗವನ್ನು ನಿರ್ಮಿಸಿ ಎಲ್ಲರ ಪುಷ್ಟಿ, ತುಷ್ಟಿ, ಶಾಂತಿ ಮತ್ತು ಅಖಂಡ ಆನಂದವನ್ನು ಸಾಧಿಸುವುದೆ ಮಾನವೀ ನೈತಿಕ ಧರ್ಮದ ಹೆಗ್ಗುರಿ.

**ಎಲ್ಲ ತೆರದಲಿ ಪುಷ್ಟಿ। ಎಲ್ಲರಾ ಸಮಪುಷ್ಟಿ**
**ಎಲ್ಲರಾ ಪುಷ್ಟಿತುಷ್ಟಿಗಳೆ ನೀಡುವವು**
**ಎಲ್ಲರಿಗು ಶಾಂತಿ ಮರ್ಮಜ್ಞ ॥ ೧೬ ॥**

**ನರಲೋಕ ತಾಯ್ನಾಡು। ಪರಲೋಕ ಪರರದೇ**
**ನರಲೋಕದಲ್ಲಿ ಪ್ರತಿಸ್ವರ್ಗ ನಿರ್ಮಿಸುವ**
**ನರವೀರನಾಗು ಮರ್ಮಜ್ಞ ॥ ೧೭ ॥**

**ನರಲೋಕ ತುಚ್ಛಿಸುವ। ಪರಲೋಕ ಮೆಚ್ಚುಗನೆ,**
**ನರಲೋಕದ್ರೋಹಿಗೆತ್ತಣದ ಮುಕ್ತಿಯದು**
**ಪರಲೋಕದಲ್ಲಿ ಮರ್ಮಜ್ಞ! ॥ ೧೮ ॥**

**ನಿರಾಶೆಯು ಪಲಾಯನ। ಪರಲೋಕವಾದವದು!**
**ಪರಾಭೂತಂಗೆ ಇಲ್ಲಿನಾ ಸಲ್ಲುವುದೆ**
**ಗೌರವವು ಅಲ್ಲಿ ಮರ್ಮಜ್ಞ? ॥ ೧೯ ॥**

**ಮಾನವೀ ವಾನರಗೆ। ಮಾನವೀ ದಾನವಗೆ**
**ಮಾನವೀ ನೀತಿ ಬಂದೊಡನೆ ಮಾನವನ**
**ಮಾನವತೆ ಪೂರ್ಣ ಮರ್ಮಜ್ಞ ॥ ೨೦ ॥**

ಮಾನವೀ ವಾನರನೆ । ದಾನವೀ ಪೀಡಕನು
ಮಾನವರು ಒಬ್ಬರೊಬ್ಬರಾ ಸಖರಾಗೆ
ಮಾನವರು ಮುಕ್ತ ಮರ್ಮಜ್ಞ ॥ ೨೧ ॥

ಆವ ನಾಡೆಮಗೇನು । ಆವ ನುಡಿ ಎಮಗೇನು
ಆವ ಗಡಿ ದಾಟಿ ಬಂದೇನು, ನಮ್ಮಗಳ
ಅವನಿಯೇ ನಾಡು ಮರ್ಮಜ್ಞ ॥ ೨೨ ॥

ನಿಮ್ಮ ನೆಮ್ಮದಿಯಲ್ಲಿ । ನಮ್ಮ ನೆಮ್ಮದಿಯುಂಟು
ನಮ್ಮಗಳ ಐಕ್ಯ ನೆಮ್ಮದಿಯನಿಮ್ಮಡಿಸಿ
ನೆಮ್ಮದಿಯು ಪೂರ್ಣ ಮರ್ಮಜ್ಞ ॥ ೨೩ ॥

ಭೋಜ್ಯದಾ ಭೋಜನವು । ಯೋಜ್ಯದಾ ಯೋಜನೆಯು
ತ್ಯಾಜ್ಯದಾ ತ್ಯಾಗ ವೈರಾಗ್ಯ ಇರಬೇಕು
ಪೂಜ್ಯದಾ ಪೂಜೆ ಮರ್ಮಜ್ಞ ॥ ೨೪ ॥

ಮತಿಗೆ ಕಾಲುಗಳಿಲ್ಲ । ಪ್ರೀತಿಗಿಲ್ಲವು ಕಣ್ಣು
ಪ್ರೀತಿಮಯ ಶುದ್ಧ ಸಮದರ್ಶಿ ಮೇಧಾವಿ
ನೀತಿಯಾ ಹೆಮ್ಮೆ ಮರ್ಮಜ್ಞ ॥ ೨೫ ॥

ಶುದ್ಧ ಮಾನವ ಧರ್ಮ । ಬುದ್ಧಿವಂತರ ಧರ್ಮ
ಯುದ್ಧನಿವೃತ್ತ, ಸ್ವಾಯತ್ತ, ಸಮದರ್ಶಿ
ಬಾಂಧವರ ಧರ್ಮ ಮರ್ಮಜ್ಞ ॥ ೨೬ ॥

ಪೂರ್ಣನಾನಲ್ಲೆಂಬ । ಪೂರ್ಣದಾ ವಂಶಜನೆ
ಪೂರ್ಣದಾ ಪೂರ್ವಸಂಸ್ಕಾರ ಸ್ಮರಣವೇ
ವಾಣಿಯಲಿ ಇಂತು ಮರ್ಮಜ್ಞ ॥ ೨೭ ॥

ಇದು ಪೂರ್ಣ ಅದು ಅಪೂರ್ಣ ಎಂದು ಎನ್ನದವರಾರು? ಪೂರ್ಣದ ವಂಶಜರಾದ ನಮಗೆ ಪೂರ್ವ ಸಂಸ್ಕಾರಗಳ ಸ್ಮರಣವಾಗಿಯೇ ನಾವು ಹೀಗೆ ಹೇಳುವುದು ಎಂದೆನ್ನುವಲ್ಲಿ ಹುರುಳಿಲ್ಲದಿಲ್ಲ. ಇದೇ ಕಾರಣ ಉಪನಿಷತ್ತು ಪೂರ್ಣದ ಬಗೆಗೆ ಹೀಗೆ ಎಂದಿರಬಹುದೆ?

ಪೂರ್ಣಮದು ಪೂರ್ಣಮಿದು । ಪೂರ್ಣಜವು ಪೂರ್ಣವೇ
ಪೂರ್ಣದಾ ಪೂರ್ಣವೆತ್ತಿದಡೆ ಉಳಿಯದೇ
ಪೂರ್ಣಮದು ಮತ್ತೆ? ಮರ್ಮಜ್ಞ ॥ ೨೮ ॥

## ೫. ಅರ್ಥ ಮತ್ತು ನೀತಿಮತ್ತೆ

ಧರ್ಮದ ವಿವೇಚನದಲ್ಲಿ ನೀತಿವಂತಿಕೆ ಮಾನವನ ಪ್ರಕೃತಿಸಿದ್ಧ, ಸ್ವಯಂಸ್ಫೂರ್ತ, ಸ್ವಾಯತ್ತ ಸೊತ್ತು ಮತ್ತು ಅದೇ ಅವನ ಸನಾತನ, ಶಾಶ್ವತ ಧರ್ಮ ಹೇಗೆ ಮತ್ತು ಏಕೆ ಎಂಬುದನ್ನು ಹೇಳಿ, ಧರ್ಮವನ್ನು ಆಗಂತುಕ ದೈವೀ, ಪಾರಲೌಕಿಕ ಉಪಾಧಿಗಳಿಂದ ಬಿಡಿಸಿ ಅದನ್ನು ನೀತಿಗೆ ಸಮೀಕರಿಸಲಾಯಿತು. ಇಂದಿನ ಪ್ರಾಜ್ಞ ಸಮಾಜದಲ್ಲಿ ನೀತಿಮತ್ತೆಯೆ ಧರ್ಮನಿಷ್ಠೆ, ಪರಂಪರಾಗತ, ಸಾಂಪ್ರದಾಯಿಕ, ಪರಾಯತ್ತ ಧರ್ಮ ನಿಷ್ಠೆಗಿಂತ ಇಂದಿನ ಸ್ವಾಯತ್ತ, ಸ್ವಯಂಸ್ಫೂರ್ತ, ಸ್ವಾಭಾವಿಕ, ಸುಬೋಧ ನೀತಿಮತ್ತೆ ನೂಮಡಿ ಲೇಸು.

ಇನ್ನು ನೀತಿಮತ್ತೆಯ ಆರ್ಥಿಕ (ಸಾಂಪತ್ತಿಕ) ಹಿನ್ನೆಲೆಯ ಸಮೀಕ್ಷೆ:—

**ಬೆನ್ನಲವೆ ನೀತಿಯೂ । ಹಿನ್ನೆಲೆಯು ಅರ್ಥದಾ**
**ಅನ್ನದಾಧಾರ ತಪ್ಪಿದಡೆ ನಷ್ಟವೇ**
**ಬಿನ್ನಣದ ನೀತಿ ಮರ್ಮಜ್ಞ** ॥ ೧ ॥

ಆರ್ಥಿಕ ಆಧಾರವು ನೀತಿಗೆ ಅತ್ಯವಶ್ಯವೆಂಬುದಕ್ಕೆ ಭಿನ್ನಾಭಿಪ್ರಾಯ ವಿಲ್ಲ. ಸಮಾಜದಲ್ಲಿ ಪುಷ್ಟಿ, ತುಷ್ಟಿ, ಶಾಂತಿ ಇರಲೆಂಬ ಒಣ ಹರಕೆ ಪ್ರಕಟಿಸುವಲ್ಲಿಯೂ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಸಾರ್ವತ್ರಿಕ ಸುಖಕ್ಕೆ ಸಾಧಕವಾಗುವ ಸಮಾಜವಾದೀ ಸಮಾಜರಚನೆಯ ಮಾತೆತ್ತಿದೊಡನೆ ವಾದ ಗಳ ಪಾಣೀಪತ್ತು! ವಿಚಾರದ ಮಟ್ಟಕ್ಕೆ ಆಚಾರವು ಏರದು. ವಿಚಾರ ತಾತ್ವಿಕ, ಆಚಾರ ವ್ಯಾವಹಾರಿಕ. ಅಂತೆಯೆ ಅವುಗಳಲ್ಲಿ ಅಜಗಜಾಂತರ ವೈಚಾರಿಕ ಗಜವು ಆಚಾರದಲ್ಲಿ ಅಜವಾಗುವುದು.

ಎಲ್ಲರೂ ಸುಖಿಯಾಗಲಿ, ನಿರಾಮಯರಾಗಲೆಂದು ಹರಸುವಲ್ಲಿ ಎಲ್ಲರೂ ಕರ್ಣನ ಅಣ್ಣಂದಿರು! ಆದರೆ ಎಲ್ಲರೂ ಸುಖಿಯಾಗಬೇಕಾದರೆ ಆರ್ಥಿಕ ಹುಟ್ಟುವಳಿ, ಹಂಚುವಳಿ ಮತ್ತು ಬಳುವಳಿ ವ್ಯಕ್ತಿಸತ್ತಾಧೀನವಾಗದೆ ಸಮಾಜ ಸತ್ತಾನಿಯಂತ್ರಿತವಾಗಲೇ ಬೇಕಾಗುವವು. ಆರ್ಥಿಕ ವ್ಯವಹಾರದ ಸಮಾಜ ವಾದೀ ನಿಯಂತ್ರಣಕ್ಕೆ ಮಾತ್ರ ಒಣ ಸಾರ್ವತ್ರಿಕ ಸುಖವನ್ನು ಹರಸುವ ಕರ್ಣಾಗ್ರಜರು ಆವೇಶಯುಕ್ತ ವಿರೋಧ ಮಾಡುವರು! ಈ ಅಂಧ ವಿರೋ ಧಕ್ಕೆ ಅರ್ಥಶಾಸ್ತ್ರದ (Economics) ಅವರ ಅಗಾಧ ಅಜ್ಞಾನವೆ ಪ್ರಧಾನ

ಕಾರಣವು. ಬಡಬಲ್ಲಿದ ವರ್ಗಗಳು ಮಾನವನಿರ್ಮಿತ, ದೈವಾಯತ್ತ ವಲ್ಲ. ಈ ಮಾತು ಅರ್ಥಶಾಸ್ತ್ರದ ಅಲ್ಪ ಪರಿಚಯ ಇದ್ದವನೂ ತಿಳಿಯಬಲ್ಲ.

**ಕೋಟಿ ಬಡವರ ಮೆಟ್ಟಿ । ಕೋಟಿಮಂತನು ಗಟ್ಟಿ**
**ರಟ್ಟೆಯಿಂ ಕಷ್ಟಬಡುವಂಗೆ ಹೊಟ್ಟೆಗೂ**
**ಬಟ್ಟೆಗೂ ಇಲ್ಲ ಮರ್ಮಜ್ಞ ॥ ೨ ॥**

ಈ ತೆರದ ದುಃಸ್ಥಿತಿಯ ಕಾರಣವೇನು? ಲಾಭಬಡಕ ಹಣವಂತರಿಗೆ ಮನಬಂದಂತೆ ಲಾಭಬಳಿಯುವ ಅವಕಾಶ ನೀಡುವ ಆರ್ಥಿಕ ವ್ಯಕ್ತಿ ಸ್ವಾತಂತ್ರ್ಯವೇ ಕಾರಣ, ಬೇರೊಂದಿಲ್ಲ.

**ಬಡವಬಲ್ಲಿದರೆಂಬ । ಬೇಡವೀ ವರ್ಗಗಳು**
**ಬಡವರಂ ಸುಲ್ದು ದಳ್ಳುವಾ ಬಲ್ಲಿದರು**
**ನಾಡಿನಾ ಕೇಡಿ ಮರ್ಮಜ್ಞ ॥ ೩ ॥**

ವ್ಯಕ್ತಿಸತ್ತಾವಾದೀ ಅರ್ಥಪದ್ಧತಿಯಲ್ಲಿ ಹಣವಂತ ಸುಲಿಗೆಗಾರರ ಲಾಭ ವೆಂದರೆ ಹಣವಿಲ್ಲದ ದುಡಿವರ, ಬಡವರ ಹಾನಿ. ಲಾಭಬಡಕ ಹಣವಂತರು ಹೆಚ್ಚು ಹೆಚ್ಚು ಸಿರಿವಂತರಾಗುವರು. ಬಡವರು ಹೆಚ್ಚು ಹೆಚ್ಚು ಹಾನಿಗೀಡಾಗಿ ಮತ್ತಷ್ಟು ಬಡವರಾಗುವರು. ಈ ರೀತಿಯಲ್ಲಿ ಬಹು ಸಂಖ್ಯೆಯ ಬಡವರು ಮತ್ತು ತೀರ ಸಣ್ಣ ಸಂಖ್ಯೆಯ ಬಲ್ಲಿದರ ಸಾಂಪತ್ತಿಕ ಸ್ಥಿತಿಯ ಅಂತರವು ಅಸಹ್ಯ ಪ್ರಮಾಣದಲ್ಲಿ ಬೆಳೆದು ಸಮಾಜದಲ್ಲಿ ವಿಷಮತೆ ಕಂಡು ಬರುವುದು. ಇನ್ನು ಈ ವೈಷಮ್ಯದ ಪರಿಣಾಮ ಸಮಾಜವಿಘಾತವೆ.

**ಕಾಂಚನದ ವೈಷಮ್ಯ । ವಂಚನೆಯ ತೆವರೂರು**
**ಸಂಚಿನಾ ಸೂಡು ಕಳ್ಳಸುಳ್ಳರ ಬೀಡು**
**ಲಂಚದಾ ಗೂಡು ಮರ್ಮಜ್ಞ ! ॥ ೪ ॥**

ವೈಷಮ್ಯದ ಮೂಲಕ ಆರ್ಥಿಕ ವ್ಯವಹಾರದ ಸೂತ್ರಗಳು ಹಲವಾರು ಸಿರಿವಂತರ ಕೈಸೇರಿ ಬಿಟ್ಟರೆ ಉಳಿದ ದಶಕೋಟಿ ಬಡವರು ಹಣವಂತರ ದಾಸಾನುದಾಸರಾಗುವರು. ದುಡಿಯಲು ಸಿದ್ಧರಿದ್ದರೂ ಲಕ್ಷಾವಧಿ ಜನರಿಗೆ ಕೆಲಸ ಸಿಗದು. ದುಡಿವ ಬಡವರಿಗೆ ಹೊಟ್ಟೆ ಬಟ್ಟೆಗೆ ಸಾಕಷ್ಟು ಗಳಿಕೆ ಆಗದು. ಹೀಗಾದ ಮೇಲೆ ದಾರಿದ್ರ್ಯದಿಂದ ಕಂಗೆಟ್ಟವರು ನೀತಿವಂತರಾಗಿಬಾಳುವುದು ಸಾಧ್ಯವೆ? 1) **क्षीणा नराः कापुरुषा भवन्ति** ಗತಿಗೆಟ್ಟವರು ನೀತಿಭ್ರಷ್ಟರಾಗು ವುದು ಸಹಜ. 2) **बुभुक्षितः किं न करोति पापम्?** ಹಸಿವೆಯಿಂದ ಬಳಲುವವನು

ಯಾವ ಪಾಪಕ್ಕೆ ಹೇಸುವನು? ಬುಭುಕ್ಷಿತ ವಿಶ್ವಾಮಿತ್ರಋಷಿ ನಾಯಿಯ ಮಾಂಸ ಭಕ್ಷಿಸಿದನಂತೆ. ಕೌರವರ ಆಶ್ರಿತರಾದ್ದರಿಂದ ದ್ರೋಣಾಚಾರ್ಯರಂಥ ತೇಜಸ್ವೀ ರಾಜಗುರುಗಳು ಮದೋನ್ಮತ್ತ ಕೌರವರ ಪಕ್ಷವಹಿಸಿ ನೀತಿವಂತ ಪಾಂಡವರನ್ನೆದುರಿಸಿದರು ಕುರುಕ್ಷೇತ್ರದಲ್ಲಿ. ಇದು ನ್ಯಾಯವೇ ಎಂದು ಕೇಳಿದ್ದಕ್ಕೆ **अर्थस्य पुरुषो दासः** ಎಂಬ ಮಾರ್ಮಿಕ ಉತ್ತರ ಕೊಟ್ಟಿರವರು.

ಅಂತೂ ಆರ್ಥಿಕ ದಾಸ್ಯದಿಂದ ಮಾನವನ ಅಧೋಗತಿ ಕಟ್ಟಿಟ್ಟಂತೆ. ಆರ್ಥಿಕ ದಾಸ್ಯಕ್ಕೆ ಆರ್ಥಿಕ ವೈಷಮ್ಯ ಕಾರಣ. ಅದಕ್ಕೆ ಆರ್ಥಿಕ ವ್ಯಕ್ತಿ ಸ್ವಾತಂತ್ರ್ಯ ಕಾರಣ. ಇದು ಕಾರಣ ಸಾಮಾಜಿಕ ನೆಮ್ಮದಿಗೆ ಸಮಾಜವಾದ ಅಪರಿಹಾರ್ಯ. ಬಡವರ ಉದ್ಧಾರ ಅವರಿಗೆ ಅನ್ನದಾನ ವಸ್ತ್ರದಾನ ಮಾಡುವುದರಿಂದ ಆಗದು. **मूले कुठारः** ಎಂಬ ನ್ಯಾಯದ ಮೇರೆಗೆ ಬಡತನದ ನಾಶಮಾಡುವ ಸಾಮ್ಯವಾದೀ ಅರ್ಥಪದ್ಧತಿಯೆ ತಕ್ಕ ಉಪಾಯ.

**ಬಡವರಾ ಉದ್ಧಾರ । ಕೊಡುಗೆಯಿಂ ಸಾಧ್ಯವೇ?**
**ಬಡವರ್ಗ ನಷ್ಟ ಪಡಿಸುವಾ ಸಾಮ್ಯವೇ**
**ಬಡವರಾ ಮೋಕ್ಷ ಮರ್ಮಜ್ಞ ॥ ೫ ॥**

**ಬೆಲ್ಲದಾ ಮಾತಿನಿಂ । ದೆಲ್ಲರಾ ಲೇಸುಂಟೆ?**
**ಹೊಲ್ಲ ವೈಷಮ್ಯವಿನಾಶಕ ಸಾಮ್ಯದಿಂ**
**ದೆಲ್ಲರಾ ಲೇಸು ಮರ್ಮಜ್ಞ ॥ ೬ ॥**

**ಶಿಷ್ಟ ನೀತಿಯಿದಂತೆ । ಸೃಷ್ಟಿಯಾ ವೈಷಮ್ಯ !**
**ದುಷ್ಟ ಪರಪುಷ್ಟ ಹುಲಿಬಾಳು ಮಾದರಿಯೆ ?**
**ಕಷ್ಟ ಹಾ ಕಷ್ಟ! ಮರ್ಮಜ್ಞ ॥ ೭ ॥**

ಸೃಷ್ಟಿಯಲ್ಲಿ ವೈಷಮ್ಯವು ಸ್ವಾಭಾವಿಕ. ಸಾಮ್ಯವೇ ವಿಕೃತಿ. ಇದು ಕಾರಣ ಮಾನವೀ ಸಮಾಜದಲ್ಲಿ ಸಮತೆ ಶಕ್ಯವಿಲ್ಲ. ಬೆಕ್ಕು ಇಲಿಗಳನ್ನು ತಿನ್ನುವದು. ಹುಲಿ ಚಿಗರಿಗಳನ್ನು ತಿನ್ನುವದು. ಎಷ್ಟು ವ್ಯಕ್ತಿಗಳೊ ಅಷ್ಟು ಪ್ರಕೃತಿಗಳು. ಸಮತಾವಾದವು ಅವ್ಯವಹಾರ್ಯ ಎಂದು ಮುಂತಾಗಿ ವ್ಯಕ್ತಿ ಸತ್ತಾವಾದಿಗಳು (ಇವರಲ್ಲಿ ದಾರಿದ್ರ್ಯಹತ ಸಾಂಪ್ರದಾಯಿಕ ಧರ್ಮನಿಷ್ಠರೂ ಉಂಟು!) ವಾದಿಸುವರು.

ಈ ರೀತಿ ವಾದಿಸುವವರಿಗೆ ಮೊದಲನೆಯದಾಗಿ ಅರ್ಥಶಾಸ್ತ್ರದ ಜ್ಞಾನ ವಿರುವುದಿಲ್ಲ. ಎರಡನೆಯದಾಗಿ ಇತಿಹಾಸದ ಪರಿಚಯವಿರುವುದಿಲ್ಲ. ಮೂರನೆ

ಯದಾಗಿ ಎಲ್ಲರಿಗೂ ಸಂಪತ್ತನ್ನು ಸರಿಯಾಗಿ ಹಂಚಿಬಿಡುವುದಾಗಲಿ, ಪ್ರತಿಯೊಬ್ಬನ ಯೋಗ್ಯತೆ ಹೇಗೇ ಇರಲಿ ಅವರೆಲ್ಲರ ಗಳಿಕೆ ಒಂದೇ ಇರಬೇಕೆಂದಾಗಲಿ ಸಮಾಜವಾದವು ಪ್ರತಿಪಾದಿಸುವುದಿಲ್ಲ. ಪ್ರತಿಪಾದ್ಯ ತತ್ವವೇ ಇವರಿಗೆ ಗೊತ್ತಿಲ್ಲ. ಇಂತು ತ್ರಿವಿಧ ಅಜ್ಞಾನ ಬಲದಿಂದ ಇವರು ವಾದಿಸುವರು. ಅವರ ವಾದವನ್ನು ಕೇಳಿ ನಲಿಯಲು ಅಜ್ಞರೇ ತಜ್ಞ ಅಧಿಕಾರಿಗಳು.

ವೈಯಕ್ತಿಕ ವಿತ್ತೋಪಾರ್ಜನೆ ಮಿತಿಮೀರಿದರೆ ಸಮಾಜ ಸ್ವಾಸ್ಥ್ಯಕ್ಕೆ ವಿಘಾತಕವಾದುದೆಂಬುದು ಅನುಭವಸಿದ್ಧ ಮಾತು. ಅಂತೆಯೆ ವೈಯಕ್ತಿಕ ಹಿಡುವಳಿ ಮತ್ತು ಗಳಿಕೆ ಇವುಗಳ ಪರಮಾವಧಿಯನ್ನು (Ceiling) ನಿಶ್ಚಯಿಸುವುದು ಅಪರಿಹಾರ್ಯ. ಇಡಿಯ ದೇಶದ, ಸಮಾಜದ ಹಿತವನ್ನು ಗಮನಿಸಿ ಹುಟ್ಟುವಳಿ, ಹಂಚುವಳಿ, ಬಳುವಳಿ ಇವುಗಳ ಸುವ್ಯವಸ್ಥಿತ ಯೋಜನೆ ಸಮಾಜಸತ್ತೆಗೆ ಶಕ್ಯವಿದೆ ವಿನಾ ಹಲವಾರು ಲಾಭಬಡಕ ಹಣವುಳ್ಳ ಉದ್ದಿಮೆಗಾರರಿಗಲ್ಲ.

**ಕಷ್ಟದಿಂ ಪುಷ್ಟಿಯಿಂ । ತುಷ್ಟಿಯಿಂ 'ಧಾರಣಾ'**
**ಕಷ್ಟವೇ ಇಲ್ದೆ ಪುಷ್ಟರಿಂ ಧಾರಣಾ**
**ನಷ್ಟವೇ ಕಾಣು ಮರ್ಮಜ್ಞ** ॥ ೮ ॥

ಪ್ರತಿಯೊಬ್ಬನು ಸ್ವಕಷ್ಟದಿಂದ ಪುಷ್ಟನಾಗಿ ತುಷ್ಟನಾಗಬೇಕು. ಇದು ನೀತಿ. ಪರಕಷ್ಟಪುಷ್ಟರು ಸಮಾಜಕಂಟಕರು. ಲಾಭಬಡಕ ಈ ಜನಗಳೇ ಸಮಾಜದ ಧಾರಣಾಶಕ್ತಿಗೆ ಅಳಿಗಾಲ ತರುವವರು. ಧಾರಣಾ ಶಕ್ತಿಯ ಅಭಾವವೆ ಅಧರ್ಮ, ಅನೀತಿ. ಅನಿಯಂತ್ರಿತ ಆರ್ಥಿಕ ವ್ಯಕ್ತಿಸ್ವಾತಂತ್ರ್ಯವೆ ಅಸಹ್ಯ ವೈಷಮ್ಯದ ಕಾರಣವು. ದೈನ್ಯ, ದಾರಿದ್ರ್ಯದ ಉತ್ಪತ್ತಿ ಹೀಗಿದ್ದು, ಅಜ್ಞರಿಗೆ ಅದು ಅಜ್ಞಾತವಾಗಿಯೇ ಉಳಿಯುವುದು. ಗತಿಗೆಟ್ಟವರು ತಮ್ಮ ದೈನ್ಯವನ್ನು ಕಳೆದುಕೊಳ್ಳಲು ಜಪತಪಾದಿ ವ್ರತಗಳನ್ನು ಮಾಡುತ್ತ ಅಲ್ಲಿಯೂ ಧೂರ್ತರಿಂದ ಸುಲಿಯಲ್ಪಟ್ಟು ಧರ್ಮಕ್ಷೇತ್ರದಲ್ಲಿಯೂ ವಾಣಿಜ್ಯದಲ್ಲಿರುವಂತೆ ಕಳ್ಳಪೇಟೆ (Black-market) ಇದೆ. ಬುವಾಬಾಜಿ, ಗುರುಬಾಜಿ, ಯೋಗಬಾಜಿ ಇತ್ಯಾದಿಗಳಿಂದ ಮತ್ತಷ್ಟು ಗತಿಗೆಡುವರು. ಮಾನವನೆ ದಾನವನಾಗಿ ನಿರ್ಮಿಸಿದ ದೈನ್ಯಕ್ಕೆ ದೇವ, ದೈವ, ಕರ್ಮ ಇವುಗಳ ಸಂಬಂಧವೇನು? ಮಾನವೀ ರೋಗಕ್ಕೆ ಮಾನವೀ ಉಪಾಯವೇ ಮದ್ದು!

**ಅರ್ಥದಲಿ ಅರ್ಥವಿದೆ । ಅರ್ಥದಿಂದನ್ನವದು**
**ಅರ್ಥದಿಂ ಪ್ರಾಣ, ಅರ್ಥಗೇಡಿಯ ಬಾಳು**
**ವ್ಯರ್ಥ, ಬಲು ಹಾಳು ಮರ್ಮಜ್ಞ** ॥ ೯ ॥

# ೬. ಕಾಲಗಳ ತಾರತಮ್ಯ

## ಹಿಂದು, ಇಂದು, ಮುಂದು

ಅರ್ಥದ ಹಿನ್ನೆಲೆ ನೀತಿಯ ಬೆನ್ನೆಲವು, ಧಾರಣಾ ಶಕ್ತಿಯು ಪ್ರಾಣ ಕಾರಣ ಅದಕ್ಕೆ ಸಾಧಕವಾಗುವಂತೆ ಅರ್ಥ ಪದ್ಧತಿ, ಆವಶ್ಯಕ. ಅಂತೆಯೆ ಆರ್ಥಿಕ ವ್ಯಕ್ತಿಸ್ವಾತಂತ್ರ್ಯವು ಸಮಾಜಸತ್ತಾನಿಯಂತ್ರಿತವಾಗುವುದು ಅಪರಿಹಾರ್ಯ ಎಂದು ನೋಡಿದ್ದಾಯಿತು. ಇನ್ನು ವ್ಯಕ್ತಿಯು ಸ್ವಕಷ್ಟಪುಷ್ಟರಾಗಬೇಕಾದರೆ ತನ್ನ ಕಾಯಕ ಸಾಗಿಸಲು ಅವನಿಗೆ ತಕ್ಕ ಶಿಕ್ಷಣಬೇಕು. ಶಿಕ್ಷಣ ಕ್ಷೇತ್ರದಲ್ಲಿ ಮೊದಲು ಹಿಂದು, ಇಂದು, ಮುಂದು ಈ ಕಾಲಗಳ ಅನ್ಯೋನ್ಯ ಸಂಬಂಧದ ಬಗೆಗೆ ನಮಗೆ ತಕ್ಕ ಜ್ಞಾನ ಬೇಕು. ಕಾರಣ ಮೊದಲು ಕಾಲ-ಜಿಜ್ಞಾಸೆ:—

ಹಿಂದಿನಾ ಚಂದದಿಂ । ದಂಧನಾದವ ಮಂದ
ಹಿಂದಣದ ವೈಭವವನುಂಡ ಈ ಇಂದು
ಹಿಂದಿನಿಂ ಚೆಂದ ಮರ್ಮಜ್ಞ ॥ ೧ ॥

ಇಂದಿನಾ ಅರಿವಿಲ್ದೆ । ಹಿಂದುಮುಂದುಗಳೂಹೆ !
ಅಂದಿಂದು ಮುಂದು ಈ ಮೂರು ಒಂದು ಮಗ-
ದೊಂದರಾ ಕಂದ ಮರ್ಮಜ್ಞ ॥ ೨ ॥

ಹಿರಿಯನಿಂ ಕಿರಿಯನೇ । ಹಿರಿಯನಾಗುವುದುಂಟು
ಹಿರಿಯನಾ ಜಾಣ್ಮೆ ಹಿಂದಣದು, ಇಂದಿಗನು
ಎರಡನೂ ಬಲ್ಲ ಮರ್ಮಜ್ಞ ॥ ೩ ॥

ಹಿಂದಿನಾ ಮಗು ಇಂದು । ಇಂದಿನಾ ಮಗು ಮುಂದು
ಇಂದಿನಿಂ ಮುಂದು ಬಲು ಚೆಂದ, ಹಿಂದಿನಿಂ
ದಿಂದು ಬಲು ಮುಂದೆ ಮರ್ಮಜ್ಞ ॥ ೪ ॥

ಸತ್ತ ತಾತನ ತಾತ । ನತ್ತತ್ತು ನೆನೆದೇನು !
ಸತ್ತವರ ಮೀರಿ ಎತ್ತರದಿ ಬಾಳುವುದು
ಉತ್ತಮರ ನೀತಿ ಮರ್ಮಜ್ಞ ॥ ೫ ॥

**ಗತದಂತೆ ಗತಿಯಿಟ್ಟು । ಗತಿಗೆಟ್ಟರಂದಿನರು**
**ಮತಗಳಾ ದಾಸ ಮುಂದಮತಿ ಮುಂದುಮತಿ**
**ಮತಗಳಾ ಸ್ವಾಮಿ ಮರ್ಮಜ್ಞ ॥ ೬ ॥**

ನಾವು ಮತಗಳನ್ನೂ, ವಾದಗಳನ್ನೂ ಆಳಬೇಕು. ನಾವೆ ಮತಗಳ ದಾಸರಾಗುವುದು ವಿಚಿತ್ರ!

**ಅಂದಿನರ ತಪ್ಪುಗಳು । ಇಂದಿನರಿಗೆಚ್ಚರವೆ !**
**ಹಿಂದಿನಾತಪ್ಪುಗಳ ಮೆಚ್ಚಿ ತಪ್ಪುವನು**
**ಎಂದಿಗೂ ಹಾಳು ಮರ್ಮಜ್ಞ ॥ ೭ ॥**

**ಅಪ್ಪಯ್ಯನಾ ತಪ್ಪು । ಒಪ್ಪು ಆಗುವುದುಂಟೆ ?**
**ತಪ್ಪು ಮುಪ್ಪಾಗಿ ಒಪ್ಪಾಗೆ, ಒಪ್ಪು ಸಹ**
**ಮುಪ್ಪಿನಲಿ ತಪ್ಪು ಮರ್ಮಜ್ಞ ॥ ೮ ॥**

ಪಾತ್ರೆಗಳು ಈದು ಐದಕ್ಕೆ ಹತ್ತಾದವೆಂಬುದು ಲಾಭದಾಯಕವೆಂದು ಒಪ್ಪಿ ಅವುಗಳನ್ನು ಹಿಗ್ಗಿ ಹಿಗ್ಗಿ ತಕ್ಕೊಳ್ಳುವವನು ಅವೆಲ್ಲ ಮುಂದೆ ಪ್ಲೊಬೇನೆಯಿಂದ ಸತ್ತುಹೋದವೆಂಬ ಕಹಿಗುಳಿಗೆಯನ್ನು ಬೆಪ್ಪನಂತೆ ಸುಮ್ಮನೆ ನುಂಗಿ ಕುಗ್ಗಬೇಕಲ್ಲವೆ?

ವಾದಪಟು (ಬಟು?) ಪಂಡಿತರು ತಮ್ಮ ವಾದವನ್ನು ಸಿದ್ಧಪಡಿಸಲು ತಾವು ಹಾಗೆ ಕರೆವ ತರ್ಕಾತೀತ ಆಪ್ತವಾಕ್ಯಗಳೆಂಬ ವಚನಗಳನ್ನು ಒಡ್ಡಿ ತಮ್ಮ ಮತ ಸಿದ್ಧವಾಯ್ತೆಂಬ ಆತ್ಮವಂಚನೆಗೀಡಾಗುವರು. ಆದರೆ ಇವರ ಈ ಆಧಾರಭೂತ ಮಹಾವಾಕ್ಯಗಳನ್ನು ಖಂಡಿಸುವ ಇದಿರಾಳ್ಗಳ ವಚನಗಳನ್ನು ಅವರು ತಮ್ಮ ಆಪ್ತವಾಕ್ಯಗಳೆಂದು ಹೇಳಿದಾಗ ಕ್ವಿನಿನ್ ತಿಂದವರಂತೆ ವಕ್ರ ತುಂಡರಾಗಿ 'ಅದೆಂತು' 'ಅದೆಂತು' ಎನ್ನುತ್ತ ಗುಣುಗುಟ್ಟಿನ ನಿಟ್ಟುಸಿರು ಬಿಡುವರು!

## ೭. ಜ್ಞಾನ, ವಿಜ್ಞಾನ, ಅಜ್ಞಾನ

ಬೆಳಕಿನಿಂ ಬಾಳಣ್ಣ । ಬೆಳಕು ಬುದ್ಧಿಯಬೇಕು
ಬೆಳಗುವಾ ಬುದ್ಧಿ ಇಲ್ಲದಿರೆ ಬೆಳೆಯದಾ
ಬಾಳೆಮ್ಮ ಹಾಳು ಮರ್ಮಜ್ಞ ॥ ೧ ॥

ಜ್ಞಾನದಾ ಆದಿತ್ಯ । ಮಾನವನ ನಿಜಸೊತ್ತು
ಜ್ಞಾನವನು ತುಚ್ಛ ಬಗೆವಾತ ಮೆಚ್ಚುವುದು
ಇನ್ನಾವುದನ್ನು ಮರ್ಮಜ್ಞ ! ॥ ೨ ॥

ಜ್ಞಾನದಿಂ ಬಲಮುಕ್ಕು । ಜ್ಞಾನದಿಂದಾನಂದ
ಜ್ಞಾನದಿಂದುಂಟು ಶುಚಿಶಾಂತಿ ಜಗದೈಕ್ಯ
ಜ್ಞಾನಿಯೇ ವಂದ್ಯ ಮರ್ಮಜ್ಞ ॥ ೩ ॥

ಜ್ಞಾನದಾ ರುಚಿಯನ್ನು । ಜ್ಞಾನವಂತನೆ ಬಲ್ಲ
ಜ್ಞಾನವೇ ಪ್ರೇಮದಾಯತನ, ಜ್ಞಾನದಿಂ
ಜ್ಞಾನವೇ ಮೋಗು ಮರ್ಮಜ್ಞ ॥ ೪ ॥

ವಿಜ್ಞಾನವೆಂದೊಡನೆ । ಅಜ್ಞಕಾರುವ ಕೆಂಡ
ಅಜ್ಞರಾ ಕಣ್ಣುಮುಚ್ಚಾಟ ತಗ್ಗಿಸಲು
ವಿಜ್ಞಾನ ಮದ್ದು ಮರ್ಮಜ್ಞ ॥ ೫ ॥

ಆಳಾಗೆ ಉಪಕಾರಿ । ಆಳಿದಡೆ ಅಪಕಾರಿ !
ಆಳಾಗಬೇಕು ವಿಜ್ಞಾನ, ಅದು ನಮ್ಮ
ನಾಳಿದಡೆ ಗೋಳು ಮರ್ಮಜ್ಞ ॥ ೬ ॥

ವಿಜ್ಞಾನ ದ್ವಿಧಾರಾ ಶಸ್ತ್ರದಂತಿದೆ, ತಾರಕವೂ ಇದೆ ಮಾರಕವೂ ಇದೆ. ಸಜ್ಜನರ ಕೈಯಲ್ಲಿ ಅದು ತಾರಕ, ದುರ್ಜನರ ಕೈಯಲ್ಲಿ ಅದು ಮಾರಕ. ಧೂರ್ತರೂ, ದುರುಳರೂ ಸ್ವಾರ್ಥಕ್ಕಾಗಿ ವಿಜ್ಞಾನವನ್ನು ವಿನಾಶಕ್ಕಾಗಿ ಯೋಜಿಸುವರು. ಅದಕ್ಕೆ ವಿಜ್ಞಾನವೇನು ಮಾಡೀತು? ಕುಡಗೋಲು ಹಣ್ಣುಗಳನ್ನೂ ಹೆಚ್ಚುವುದು, ರುಂಡಗಳನ್ನೂ ಸವರುವದು!

ವಿಜ್ಞಾನಿ ಕೆಡುಕಲ್ಲ । ಅಜ್ಞಾನಿ ಕಿಡಿಗೇಡಿ
ತಜ್ಞವಿಜ್ಞಾನಿ ಧೂರ್ತರಾ ಕೈಸೇರಿ
ವಿಜ್ಞಾನ ಹಾಳು ಮರ್ಮಜ್ಞ ॥ ೭ ॥

ಬಲ್ಲೆ ನಾನೆಂದು ಬಲು । ಬಲ್ಲವನು ಎನಲೊಲ್ಲ
ಎಲ್ಲದನು ಬಲ್ಲೆ ಗೆಲ್ಲನೇ ನಾನೆಂಬ
ಬಲ್ಲನೇ ತನ್ನ, ಮರ್ಮಜ್ಞ? ॥ ೮ ॥

ಅಂಧಶ್ರದ್ಧರ ಕೂಟ । ಬುದ್ಧಿಯಾ ಹುಡುಗಾಟ
ಅಂಧರಾ ಅಂಧ ಗುರುವಾಗೆ ಕಾಲಿಗೇ
ಬುದ್ಧಿಯನು ಹೇಳು ಮರ್ಮಜ್ಞ ॥ ೯ ॥

ಶುದ್ಧಿಯಿಂ ಮೇಗಿಲ್ಲ । ಯುದ್ಧದಿಂ ಕೆಳಗಿಲ್ಲ
ಬುದ್ಧನಿಂದಿನ್ನು ಗುರುವಿಲ್ಲ, ಮಾನವಗೆ
ಬುದ್ಧಿಯೇ ದೀಪ ಮರ್ಮಜ್ಞ ॥ ೧೦ ॥

## ೮. ಜಗನ್ನಾಗರಿಕ

ಇಂದಿಗನು ಹಿಂದಿಗನಂತೆ ಗಡಿಯುಳ್ಳ ನಾಡಿಗನಲ್ಲ, ಗಡಿಯಿಲ್ಲದ ಜಗನ್ನಾಗರಿಕ.

**ಇಂದಿನಾ ನಾಗರಿಕ । ಮೇದಿನಿಯ ನಾಡಿಗನು**
**ಹಿಂದಿನರ ನಾಡುನುಡಿಗಳಾ ಸಂಕೋಚ**
**ಇಂದಿನರಿಗಿಲ್ಲ ಮುರ್ಮುಜ್ಞ** ॥ ೧ ॥

**ಮೇದಿನಿಯೆ ಗಡಿಯಿಲ್ಲ । ಇಂದಿಗನ ತಾಯ್ನಾಡು**
**ಇಂದಿನರ ಭಾಗ್ಯಭಾಂಡಾರ ಕಂಡಿಲ್ಲ**
**ಹಿಂದಿನಾ ಇಂದ್ರ ಮುರ್ಮುಜ್ಞ** ॥ ೨ ॥

**ಜಾಗತಿಕ ಸಂಪರ್ಕ । ಜಾಗತಿಕ ಸೌಹಾರ್ದ**
**ಜಾಗತಿಕ ಭೋಗ ಸಂದರ್ಭ, ಸಂತಸವ**
**ಈಗಿನರ ನೋಡು ಮುರ್ಮುಜ್ಞ** ॥ ೩ ॥

ಇಂತುಜಗನ್ನಾಗರಿಕನ ಭಾಗ್ಯಭಾಂಡಾರ. ಇನ್ನು ಕ್ಷುದ್ರ ಕೂಪಮಂಡೂಕನ ದೈನ್ಯದಾರಿದ್ರ್ಯ ನೋಡಿ. ತನ್ನ ಕುಲ ಶ್ರೇಷ್ಠ, ಏಕೆ? ಅದು ಈ ಮಂಡೂಕ ಮಹಾಶಯರ ವಂಶ ತಾನೆ! ಇವನ ನಾಡು ಪುಣ್ಯಭೂಮಿ! ಪರನಾಡು? ಅದು ಪಣ್ಯನಾಡು! ಅದೇಕೆ? ಈ ಮಹಾಭಾಗ ಅಲ್ಲಿ ಹುಟ್ಟಿಲ್ಲ! ಇವನ ತಾಯ್ನುಡಿ ಅಮೃತವಾಣಿ. ಅದೇಕೆಂದು ಕೇಳಬೇಡಿ. ಈ ಕೊಂಪಿಗಪ್ಪೆಯು ಆಡುವ ನುಡಿಯಲ್ಲಿ ಪೀಯೂಷವಲ್ಲದೆ ವಿಷ ಬಂದೀತೇ? ಹೇಗಿದೆ ನಮ್ಮ ಮಾದರಿಯ ನಾಡುಬಕುತನ ವಿಚಾರ—ಅಲ್ಲ, ಕ್ಷಮಿಸಿ—ವಿಕಾರಸರಣಿ?

**ಆ ನಾಡು ಬೇಡೆಂಬ । ಈ ನಾಡು ಕಾಡೆಂಬ**
**ತಾಯ್ನಾಡೆ ನಾಡು ನೋಡೆಂಬ ನಾಡಿಗನು**
**ಯಾವ್ನಾಡು ಬಲ್ಲ ಮುರ್ಮುಜ್ಞ?** ॥ ೪ ॥

**ಪುಣ್ಯದೀ ನಾಡಾಗೆ । ಪುಣ್ಯವೇ ಆ ನಾಡು !**
**ಗಣ್ಯವೂ ಅಲ್ಲದ ನಿಮ್ಮದೀ ಕಾರ್ಪಣ್ಯ**
**ಪುಣ್ಯಫಲ ತಾನೆ, ಮುರ್ಮುಜ್ಞ?** ॥ ೫ ॥

**ನಮ್ಮದೀ ಕುಲ ಊಚ । ನಿಮ್ಮದಾ ಕುಲ ನೀಚ !**
**ಹೆಮ್ಮೆಯಾ ಮಾತಿಗೀತೆರದ ಮೂವಳಿಯೆ**
**ನಮ್ಮಗಳ ಮುದ್ದು ಮುರ್ಮುಜ್ಞ** ॥ ೬ ॥

# ೯. ವ್ಯಕ್ತಿ ಮತ್ತು ಸಮಾಜ

## (೧) ಶಿಕ್ಷಣ

ಇಂದಿನ ನಾಡಿಗನು ಜಗನ್ನಾಗರಿಕ. ಹಿಂದಿನರ ನಾಡು ನುಡಿಗಳ ಸಂಕೋಚಗಳಿಗಂಟಿಕೊಂಡ ಕೂಪಮಂಡೂಕರಿಗೆ ಇಂದಿನ ಜಗತ್ತಿನಲ್ಲಿ ಅವಕಾಶವಿಲ್ಲ. ಜಾಗತಿಕ ಪಾತಳಿಯ ಮೇಲೆ ಅವನ ವಿದ್ಯಾಭ್ಯಾಸ, ಶಿಕ್ಷಣ ಸಾಗಬೇಕಾಗುವುದು. ಅವನ ವ್ಯಕ್ತಿತ್ವದ ಸರ್ವಾಂಗಸುಂದರ ವಿಕಾಸವಾಗಿ ಅವನೊಬ್ಬ ಸಮಾಜಪ್ರೇಮಿ, ನೀತಿಮಾನ್, ವಿದ್ವಾನ್, ಕಾರ್ಯರತ, ಕಾರ್ಯಕ್ಷಮ, ಸ್ವಕಷ್ಟಾರ್ಜಿತ ಸಾಕಷ್ಟು ತನ್ನ ಕಾಯಕದಿಂದ ಗಳಿಸಿ ಸ್ವಾವಲಂಬಿಯಾಗಿ ಬಾಳಲಿಕ್ಕೆ ಅರ್ಹನಾಗುವಂತೆ ಅವಗೆ ಶಿಕ್ಷಣ ದೊರೆಯಬೇಕು.

ಇಂದಿನ ಶಿಕ್ಷಣಶಾಸ್ತ್ರವು ಸ್ತುತ್ಯರೀತಿಯಲ್ಲಿ ವಿಕಾಸಗೊಂಡಿದ್ದು ಪ್ರಗತಿಶೀಲವಿದೆ. ಶಿಕ್ಷಣದ ಉಪಕರಣಗಳ, ಗ್ರಂಥಗಳ, ಪೋಷಕ ಸಾಧನಗಳ ಕೊರತೆಯಿಲ್ಲ. ಹಿಂದುಳಿದ ದೇಶಗಳನ್ನು ಬಿಟ್ಟು, ತಜ್ಞ ಶಿಕ್ಷಕರೂ ಉಂಟು. ಆದರೆ ಶಿಕ್ಷಕರಿಗೆ ಸಮಾಜದಲ್ಲಿ ಸನ್ಮಾನ್ಯ ಸ್ಥಾನಮಾನವಿಲ್ಲ. ಎಲ್ಲಿ ನೋಡಿದಲ್ಲಿ ರಾಜಕಾರಣಿಗಳ, ಧನಾಢ್ಯ ಉದ್ದಿಮೆಗಾರರ, ಸತ್ತಾಧೀಶ ಆಡಳಿತಗಾರರ ಮೇಲುಗೈ ಇದೆ. ಹೀಗಾಗಿ ಪ್ರಥಮಶ್ರೇಣಿಯ ಬುದ್ಧಿಮಾನ್, ವ್ಯಕ್ತಿಮಾನ್, ವಿದ್ಯಾವಂತರಿಗೆ ಶಿಕ್ಷಕವೃತ್ತಿಯು ಅಷ್ಟು ಆಕರ್ಷಕವೆನಿಸದಾಗಿದೆ. ಉಳಿದ ಕಾರ್ಯಕ್ಷೇತ್ರಗಳ ಮಾನದಿಂದ ಶಿಕ್ಷಕವೃತ್ತಿಯ ಸಂಬಳದ, ಗಳಿಕೆಯ ಮಟ್ಟವು ಸಾಕಷ್ಟು ಏರಿಲ್ಲ. ಇದರ ಪರಿಣಾಮವಾಗಿ ಮತ್ತು ಶಿಕ್ಷಕರ ಅಧಿಕಾರ ಮಾನವೂ ಹೀನವಾದುದರಿಂದ ತಮ್ಮ ಕಾಯಕವು ಪವಿತ್ರವಾದುದು, ಮಿಗಿಲಾದುದು, ಅದೇ ಪರಮಾರ್ಥ ಎಂದು ಭಾವಿಸಿ ದುಡಿವ ತೇಜಸ್ವೀ ಶಿಕ್ಷಕರು ಅಪರೂಪ.

ಬಾಲಕರ ಶಿಕ್ಷಣದತ್ತ ಗಮನ ಕೊಡುವ ಪಾಲಕರ ಸಂಖ್ಯೆ ತೀರ ಸಣ್ಣದು. ಆರ್ಥಿಕ ದುಃಸ್ಥಿತಿಗೆ ತುತ್ತಾದವರು ಬಾಳಿನ ಹೋರಾಟದಲ್ಲಿ ಗೋಳಾಡುವರು. ಸುಸ್ಥಿತಿಯಲ್ಲಿದ್ದವರಲ್ಲಿ ವಿಲಾಸಲೋಲುಪರೇ ಬಹಳ. ಹಲವರು ಸ್ವತಃ ನೀತಿಶೂನ್ಯರು. ವಿದ್ಯೆಗಿಂತ ಅವರಲ್ಲಿ ಅವಿದ್ಯೆಯೆ ಪ್ರಭಾವಿ. ಹಲವು ಪಾಲಕರು ಮಾತ್ರ ತಮ್ಮ ಅನುಕರಣೀಯ ನಡೆವಳಿಯಿಂದ ಬಾಲಕರಿಗೆ ಯೋಗ್ಯ ಗೃಹಶಿಕ್ಷಣವನ್ನು ಒದಗಿಸಿ ಕೊಡುವರು. ಶಾಲೆಯ ಶಿಕ್ಷಣ

ದಷ್ಟೆ ಗೃಹಶಿಕ್ಷಣಕ್ಕೆ ಮಹತ್ವವಿದ್ದು, ಅದರ ಅಭಾವದಲ್ಲಿ ವಿದ್ಯಾಲಯೀನ ಶಿಕ್ಷಣವು ವಿಫಲವಾಗುವುದು. ಇದರ ಅರಿವಿದ್ದ ಪಾಲಕರೆಷ್ಟು?

ಇನ್ನು ವಿದ್ಯಾರ್ಥಿಗಳ ಬಗೆಗೆ ಹೇಳುವುದೆಂದರೆ, ವಿದ್ಯಾಪ್ರೇಮಿಗಳು ಯಾವ ಕಾಲದಲ್ಲಿಯೂ ಅಲ್ಪಸಂಖ್ಯರೆ. ಹತ್ತರಲ್ಲಿ ಇಬ್ಬರು ವಿದ್ಯಾರ್ಥಿಗಳು ಉಳಿದವರು ಪರೀಕ್ಷಾರ್ಥಿಗಳೆ. ಮಾರ್ಗದರ್ಶಕ ಕುಂಬಳ ಕಾಯಿಗಳ ನೆರವಿನಿಂದ ಪರೀಕ್ಷಾ ಪ್ರವಾಹಗಳನ್ನು ಅಂತೂ ಇಂತೂ ದಾಟಿ, ಅವಿದ್ಯಾಕರಾವಳಿಯ ಕೊನೆಯ ನಿಲ್ದಾಣವನ್ನು ಮುಟ್ಟಿ ಒಮ್ಮೆ ಪ್ರಮಾಣಪತ್ರಧಾರಿಗಳಾದರೆಂದರೆ ಆಯ್ತು ಪರೀಕ್ಷಾರ್ಥಿಗಳ ಪುರುಷಾರ್ಥಸಿದ್ಧಿ. ಹೆಸರಿಗೆ ವಿದ್ಯಾವಿಭೂಷಿತ, ಕೋವಿದ, ವಿಶಾರದ, ಪಂಡಿತ. ವಾಸ್ತವದಲ್ಲಿ ವಿದ್ಯಾವಿಧ್ವಂಸಕ, 'ಕೋऽಹಂ ನವೇದ', ಆತ್ಮಪರವಂಚನ ವಿಶಾರದ, ಪಿಂಡಪಂಡಿತ.

ಶಿಕ್ಷಣಕ್ಷೇತ್ರದ ವಿಡಂಬನದ ಪ್ರಧಾನ ಕಾರಣ ಸಂಧಿಸಾಧಕ ರಾಜಕಾರಣ. ಇದನ್ನೀಗ ಬರೆವಾಗ ನನ್ನಿದಿರು ಒಂದು ವೃತ್ತಪತ್ರವಿದೆ. ನೆರೆಯ ನಾಡಿನ ರಾಜಕಾರಣಬಟುಗಳೊಬ್ಬರು ಅಲ್ಲಿನ ರಾಜಕೀಯ ಬಿಕ್ಕಟ್ಟು ಬಿಡಿಸಲೋಸುಗ ತರುಣ ವಾನರಯೂಥಗಳಿಗೆ ಕರೆಕೊಟ್ಟಿದ್ದು, ಇತ್ತಂಡ ಮುತ್ತಂಡವಾಗಿ ಸಿಡಿದಾಡುವ ಅಲ್ಲಿನ ಮುಖಂಡರನ್ನೆಲ್ಲ ಒತ್ತಂಡವಾಗಿ ಕೂಡಿಸಲು ಪ್ರಚಂಡ ಒತ್ತಾಯವನ್ನು ಕಿರಿಯರೆಲ್ಲ ಹಿರಿಯರ ಮೇಲೆ ತರಬೇಕಂತೆ! ತಮಗೇ ಕಲ್ಲೆಸೆವಾಗ ವಿದ್ಯಾರ್ಥಿಗಳು ರಾಜಕೀಯರಂಗದಿಂದ ದೂರ ಇರಬೇಕೆಂದು ಬುದ್ಧಿ ಹೇಳುವವರು ಕೋತಿಗಳು ತಮಗೆ ನೆರವು ನೀಡುವ ಸಂದರ್ಭ ಕಂಡು ಅವುಗಳ ಕೈಯಲ್ಲಿ ಉರಿಯುವ ಪಂಜುಗಳನ್ನು ಕೊಡುವರು! ತರುಣರಿಗೆ ವಾನರನೀತಿಯ ದೀಕ್ಷೆಯನ್ನು ನೀಡುವ ಸ್ವಾರ್ಥಸಾಧಕ ಹಿರಿಯರಿಗೆ ಇಂದಿನ ಕಿರಿಯರಲ್ಲಿ ಗುರುಹಿರಿಯರ ಬಗೆಗೆ ಪ್ರೀತ್ಯಾದರಗಳಿಲ್ಲವೆಂದು ದೂರಿಕೊಳ್ಳುವ ಅಧಿಕಾರವುಂಟೆ?

**ಆದ್ಯವಿದು ಅಸ್ತೇಯ । ವಿದ್ಯೆಯಾ ಭಾಂಡಾರ**
**ಖಾದ್ಯಗಳ ಕಳ್ಳರೇ ಸುತ್ತ. ಕಾಣೆ ನಾ**
**ವಿದ್ಯೆಯಾ ಕಳ್ಳ ಮುರ್ಮುಜ್ಞ** ॥ ೧ ॥

**ಮದ್ಯಭಕ್ತರು ಅತ್ತ । ವಾದ್ಯಭಕ್ತರು ಇತ್ತ**
**ನಿಂದ್ಯ ಸತ್ತಾಂಧ ಸರ್ವತ್ರ. ಅಪರೂಪ**
**ವಿದ್ಯೆಯಾ ಭಕ್ತ ಮುರ್ಮುಜ್ಞ** ॥ ೨ ॥

ಲಕ್ಷಣವು ಪೂರ್ಣದಾ । ಶಿಕ್ಷಣದಿ ಮಿಂಚುವುದು!
ಶಿಕ್ಷಿತನ ವಿದ್ಯೆ ಬಾಳಿನಲಿ ತಾಳದಿರೆ
ಶಿಕ್ಷಣವು ಹಾಳು ಮುರ್ಜಜ್ಞ ॥ ೩ ॥

ಸಾಕ್ಷರತೆ ಒಣವಿದ್ಯೆ । ಶಿಕ್ಷಣಕೆ ಸಾಲುವವೆ?
ಭಕ್ಷ್ಯವೇ ಮೋಕ್ಷ ಬಗೆಯುವಾ ವಿದ್ವತ್ವ
ರಾಕ್ಷಸೀ ವಿದ್ಯೆ ಮುರ್ಜಜ್ಞ ॥ ೪ ॥

ಸಂತತಿಯು ಸಂತಸಕೆ । ಚಿಂತೆಯಾ ಸಂತತಿಯು !
ಸಂತತಿಗೆ ಶೀಲ ವಿದ್ವತ್ವ ನೀಡದಾ ಪಾಲಕಗೆ
ಸಂತತಿಯು ಚಿಂತೆ ಮುರ್ಜಜ್ಞ ॥ ೫ ॥

ಶಿಶುಪಾಲರೆಂಬವರು । ಪಶುಪಾಲರೇ ಬಹಳ !
ಶಿಶು ತನ್ನ ಸೊತ್ತು ಎನ್ನುವಾ ಸೂಲ್ತಾನ
ಶಿಶುಪಾಲನಲ್ಲ ಮುರ್ಜಜ್ಞ ॥ ೬ ॥

ಪಾಲಕರ ರೀತಿಯನೆ । ಬಾಲಕರು ಎತ್ತುವರು
ಬಾಲಕನ ಪುಟ್ಟ ಕನ್ನಡಿಯು ಹೇಳುವುದು
ಪಾಲಕನ ಗುಟ್ಟು, ಮುರ್ಜಜ್ಞ! ॥ ೭ ॥

ದೊಡ್ಡವರ ಮಕ್ಕಳಲಿ । ಹೆಡ್ಡರೇ ಬಹಳಲ್ವೆ?
ಗುಡ್ಡಗಳು ದೂರ ಬಲುಚೆಂದ, ಹತ್ತಿರದಿ
ನೋಡಲಾಸಲ್ಲ, ಮುರ್ಜಜ್ಞ! ॥ ೮ ॥

ದೊಡ್ಡವರು ತಪ್ಪದೇ । ನೋಡುವರು ಬಲುದೂರ
ಅಡಿಯಲ್ಲಿ ಅಡ್ಡ ಬಂದುದನ ಎಡವಿಯೂ
ದೊಡ್ಡವನು ನೋಡ ಮುರ್ಜಜ್ಞ ॥ ೯ ॥

ಒಲವಿಲ್ದೆ ಕಲಿವಾತ । ಕಲಿಸದಾ ಗುರವರ್ಯ
ನಲಿಸದಾ ನಲ್ಲ ನಲ್ಲೆಯುರು ಹೋತಿನಾ
ಮೊಲೆಯಂತೆ ಮೋಸು ಮುರ್ಜಜ್ಞ ! ॥ ೧೦ ॥

ಭಾವನೆಯು ಕಾವಿಲ್ದೆ । ಕಾವ್ಯಗಳ ಕಲಿತೇನು?
ಆವ ಜಿಜ್ಞಾಸೆಯೋ ಇಲ್ದ ವಿಜ್ಞಾನ
ಕೋವಿದರ ನೋಡು ಮುರ್ಜಜ್ಞ ! ॥ ೧೧ ॥

ಕಲಾಸಂಸ್ಕೃತಿಹೀನ । ಕಲಾವಿದರಿದು ಗುಂಪು !
ನಲಿಸುವಾ ಒಂದು ಮಾತಿಲ್ಲ, ನಡೆಯಲ್ಲಿ
ಶೀಲವೇ ಇಲ್ಲ ಮರ್ಮಜ್ಞ! ॥ ೧೨ ॥

ನಾಲಿಗೂ ಬೆಲೆಯುಂಟು । ನಾಲಿಗೆಗೆ ಇರಲಾರ್ದೆ?
ನಾಲಿಲ್ದೆ ಅಶ್ವ ಮುಕ್ಕರಿಸಿ ಸೇನಾನಿ
ಸೋಲಿನಲಿ ಸತ್ತ ಮರ್ಮಜ್ಞ ॥ ೧೩ ॥

ಶೀಲವಿಲ್ಲದ ವಿದ್ಯೆ । ಕೀಲವಿಲ್ಲದ ಗಾಲಿ
ಕೀಲಿಲ್ದ ಗಾಲಿ ಹೋಳಾಗೆ ರಥಿಕನಾ
ಕಾಲು ಮುಕ್ಕಾಲು ಮರ್ಮಜ್ಞ ॥ ೧೪ ॥

ಕಾಯಕಕೆ ಬಾರದಾ । ಸಾಯುವಾ ವಿದ್ಯೆಯದು !
ಸ್ವಾಯತ್ತನಾಗಲಾರದಾ ವಿದ್ವಾಂಸ
ಸಾಯುವಲಿ ಜಾಣ ಮರ್ಮಜ್ಞ! ॥ ೧೫ ॥

ಬುದ್ಧಿಯಾ ಸ್ವಾತಂತ್ರ್ಯ । ಬುದ್ಧಿವಂತನ ಪ್ರಾಣ
ಶ್ರದ್ಧೆಯಲಿ ಅಂಧನವನಾಗೆ ಅವಗುಂಟು
ಅಂಧಂತಮಸ್ಸು ಮರ್ಮಜ್ಞ ॥ ೧೬ ॥

ಕಣ್ಣೆತ್ತಿ ಕಂಡತ್ತ । ಕಣ್ಣುಳ್ಳ ಕುರುಡರೇ !
ಕಣ್ಣಿದ್ದು ನೋಡಲೇ ಒಲ್ದ ವಿದ್ವತ್ವ
ಮಣ್ಣಿನಾ ಪಾಲು ಮರ್ಮಜ್ಞ ॥ ೧೭ ॥

ಮೃದುವಾಗಿ ಎದೆಯಲ್ಲಿ । ಹದನಾಗಿ ಬುದ್ಧಿಯಲಿ
ಮೇದಿನಿಗೆ ಹೊಂದಿ ಒಂದಾಗಿ ಹಿಗ್ಗುವುದು
ವಿದ್ಯೆಯಾ ಹೆಮ್ಮೆ ಮರ್ಮಜ್ಞ ॥ ೧೮ ॥

ಧರ್ಮದಾ ಶಿಕ್ಷಣವ । ಧಾರ್ಮಿಕರು ಬೇಡುವರು !
ಧರ್ಮದಾ ಮರ್ಮ ವಿದ್ಯೆಯಲಿ ಬಾರದಿರೆ
ಧಾರ್ಮಿಕರ ಕರ್ಮ ! ಮರ್ಮಜ್ಞ ॥ ೧೯ ॥

## (೨) ಕಾಯಕ

ಸರ್ವಾಂಗವಿಕಾಸಕ್ಕೆ ಪೋಷಕವಾದ ಶಿಕ್ಷಣ ಸಂಪಾದಿಸಿದ ಜಗನ್ನಾಗರಿಕನು ತನ್ನ ಶಿಕ್ಷಣಕ್ಕನುಗುಣವಾದ ಕಾಯಕವನ್ನೆತ್ತಿ ಸ್ವಾಯತ್ತನಾಗುವನು. ಇನ್ನು ಕಾಯಕದ ವಿಚಾರ:

ಪಡೆದು ಬಂದವರಿಲ್ಲ । ದುಡಿದೆ ದೊಡ್ಡವರಿಲ್ಲಿ
ದುಡಿತವೂ ದೊಡ್ಡದೆ ಮಾರ್ಕೋನಿ ಐನ್ಸ್ಟನ್
ಪಂಡಿತರದೆಲ್ಲ ಮುರ್ಜ್ಞ ॥ ೧ ॥

ಕಷ್ಟದಾ ಫಲವಲ್ದೆ । ಮಿಷ್ಟವಾವುದು ಉಂಟೆ ?
ಕಷ್ಟದಿಂದಾದ ಇಷ್ಟಾರ್ಥದಾ ಸಿದ್ಧಿ
ಮಿಷ್ಟವೇ ನಿತ್ಯ ಮುರ್ಜ್ಞ ॥ ೨ ॥

ಕಾಯಕದಿ ಮಾತ್ರವೇ । ಸ್ವಾಯತ್ತಮಾನವನು
ಕಾಯಕವನೊಲ್ದ ಮೈಗಳ್ಳನಾ ಬಾಳು
ಸ್ತೇಯದಲಿ ಹಾಳು ಮುರ್ಜ್ಞ ॥ ೩ ॥

ಯುಕ್ತನಾ ಬಸವಣ್ಣ । ಭಕ್ತಿಯಾ ಭಾಂಡಾರಿ
ಭಕ್ತನಾ ಸಗ್ಗ ಕಾಯಕವೆ, ಅಲ್ಲಿಯೋ
ಮುಕ್ತನವನೆಂದ ಮುರ್ಜ್ಞ ॥ ೪ ॥

ಊಚ ಕಾಯಕವಿಲ್ಲ । ನೀಚ ಕಾಯಕವಿಲ್ಲ
ಊಚನೀಚೆಂಬ ಮಾತುಗಳು ಕಾಯಕದ
ಆಚೆಗಣವಾಚೆ ಮುರ್ಜ್ಞ ॥ ೫ ॥

ಕಾಯಕದಿ ಸತ್ತ ಎಲ । ಗಾಯಬತ್ತದ ಕತ್ತೆ !
ದಯಾಘನ ಸ್ವಾಮಿ ನಿನ್ನೆಂತು ಕೈಬಿಟ್ಟ
ಸಾಯಲತ್ತಿತ್ತ ಮುರ್ಜ್ಞ ॥ ೬ ॥

ಕಾಯಕಿಗೆ ನೀ ಮುತ್ತು । ಧ್ಯೇಯನಿಷ್ಠುರ ಕತ್ತೆ !
ಮೋಯಿಸದೆ ನಿನ್ನ ದುಡಿಸುವಾ ದಾನವನು
ಕಾಯಕಕೆ ಕುತ್ತು ಮುರ್ಜ್ಞ ॥ ೭ ॥

ಹಳಿಬೇಡ ಕತ್ತೆಯನ । ತಿಳಿಗೇಡಿಯೋ ಕತ್ತೆ ?
ತಾಳ್ಮೆಯಲಿ ನಮ್ಮಗಳಿಗೆಲ್ಲ ಬುದ್ಧಿಯನು
ಹೇಳುವುದು ಕತ್ತೆ ಮುರ್ಜ್ಞ ! ॥ ೮ ॥

ಕಾಯಕಿಗೆ ಮಾದರಿಯೆ। ನಾಯಿಯಾ ಕಾಯಕವು
ನಾಯಕನ ತನ್ನ ಜೀವದಾ ಹಂಗಿಲ್ದೆ
ಕಾಯುವಾ ವೀರ ಮರ್ಮಜ್ಞ! ॥ ೯ ॥

ಕಾಯಕವು ನಮ್ಮಗಳ। ಧ್ಯೇಯದಾ ಸಂಗೀತ
ಶ್ರೇಯವೇ ವಾದಿ ಪ್ರೇಯಸ್ಸು ಸಂವಾದಿ
ಸ್ತೇಯವೇ ವರ್ಜ್ಯ ಮರ್ಮಜ್ಞ ॥ ೧೦ ॥

ಸ್ವಾಯತ್ತ ಕಾಯಕವೆ। ಕಾಯಕಿಯ ಪ್ರೇಯಸ್ಸು
ಕಾಯಕದ ಹಾಸು ಹೋಕುಗಳು ಪ್ರೇಯಸ್ಸು
ಶ್ರೇಯಸ್ಸು ನಿತ್ಯ ಮರ್ಮಜ್ಞ ॥ ೧೧ ॥

ನ್ಯಾಯ ಸಂಮತವಲ್ಲ। ಶ್ರೇಯಪ್ರೇಯವಿರೋಧ
ಕಾಯಕವನೊಲ್ದ ದಾರ್ಶನಿಕ ಪ್ರೇಯದಲಿ
ಶ್ರೇಯವನು ಕಾಣ ಮರ್ಮಜ್ಞ! ॥ ೧೨ ॥

## (೩) ದೇಹದೇಹೀ ಸಂಬಂಧ

ಮಾನವೀ ಪುರುಷಾರ್ಥ ಧರ್ಮಾರ್ಥಕಾಮಮೋಕ್ಷಾತ್ಮಕ ಚತುರ್ಮುಖನೆಂದು ಭಾವಿಸಲಾಗಿದೆ. ಈ ನಾಲ್ಕು ಭಿನ್ನವಾಗಿ ತೋರುವ ಪುರುಷಾರ್ಥಗಳು ಬೇರೆ ಬೇರೆಯಾಗಿ ಸಾಧಿಸಬಹುದಾದವುಗಳೆಂಬ ತಪ್ಪು ತಿಳಿವಳಿಕೆಯಾಗಬಾರದು. ಇವೆಲ್ಲ ನಮ್ಮ ಬಾಳಿನಲ್ಲಿ ಆದಿಯಿಂದ ಕೊನೆಯ ವರೆಗೂ ನಾವು ಬಳಸತಕ್ಕವುಗಳು. ನೀತಿ (ಧರ್ಮ) ನಮ್ಮ ಮಾನವತೆಗೆ ಪೋಷಕವಾದ, ಸ್ವಾಭಾವಿಕ ಬಾಳಿನ ರೀತಿ. ರೀತಿಯಿಲ್ಲದೆ ಲೆಕ್ಕ ತಪ್ಪುವಂತೆ, ನೀತಿಯಿಲ್ಲದೆ ನಮ್ಮ ಬಾಳು ಹಾಳೆಂಬುದನ್ನು ನೋಡಿದ್ದೇವೆ. ತೃಪ್ತಿಕಾರಕ ಆರ್ಥಿಕ ಹಿನ್ನೆಲೆ (ಆಧಾರ) ನೀತಿಯ ಬೆನ್ನೆಲವೆ ಇರುವ ಕಾರಣ ಅರ್ಥ (ಸಂಪತ್ತು)ದಲ್ಲಿ ಅರ್ಥವಿಲ್ಲ ಎಂಬ ಮಾತಿನಲ್ಲಿ ಅರ್ಥವಿಲ್ಲ.

ವಿದ್ಯಾವಿನಯ ಸಂಪನ್ನನಾಗಿ ನಾಗರಿಕನು ತನಗೆ ಒಗ್ಗುವ ಕಾಯಕವನ್ನು ಅದೇ ತನ್ನ ಸರ್ವಸ್ವವೆಂದು ಬಗೆದು ಅದನ್ನು ಕೌಶಲ್ಯದಿಂದ ಮಾಡುತ್ತ ತನ್ನ ಸ್ವಾಯತ್ತ ಜೀವನದಲ್ಲಿ ಕಾಮಾರ್ಥಿಯೆಂಬುದಾಗಿ ಭೋಗವೀರನ ಪುರುಷಾರ್ಥ ಸಾಧಿಸಬೇಕು. ಭೋಗವೀರನೆ ತ್ಯಾಗವೀರನಾಗಬಲ್ಲ. ತ್ಯಾಗ ಮಾಡಲಿಕ್ಕೆ ಬಳಿಯಲ್ಲಿ ಏನಾದರೂ ಇರಬೇಕಷ್ಟೇ. ಮಾನವತೆಯ ಪೂರ್ಣ,

ಸರ್ವಾಂಗ ವಿಕಾಸಕ್ಕೆ ಬಾಧಕವಾಗದ ರೀತಿಯಲ್ಲಿ ಭೋಗ್ಯದ ಭೋಗವನ್ನು ಸಂಯಮದಿಂದ ಮಾಡುವವನೆ ಭೋಗವೀರ. ಭೋಗವು ಸ್ವಾದಿಷ್ಟವಾಗ ಬೇಕಾದರೆ ಸಂಯಮ ಇಲ್ಲವೆ ತ್ಯಾಗಬೇಕು. ಇದು ಅನುಭವಸಿದ್ಧ ಮಾತು, ತ್ಯಾಗವಿಲ್ಲದ ಭೋಗ ಕೀಲವಿಲ್ಲದ ಗಾಲಿ, ಕಡಿವಾಣವಿಲ್ಲದ ಕುದುರೆ. ಸಂಯಮವೆ ನಮ್ಮನ್ನು ಭೋಗ್ಯದ ದಾಸ್ಯದಿಂದ ಮುಕ್ತ ಮಾಡುವುದು.

ಇಂತು ಧರ್ಮ ಅರ್ಥಾತ್ ನೀತಿ, ಅರ್ಥ, ಕಾಮ, ಮೋಕ್ಷ ಇವುಗಳ ಸಮತೂಕ ಬಳುವಳಿಯಿಂದ ಮಾನವತೆಯ ಪೂರ್ಣವಿಕಾಸ ಶಕ್ಯವಿದೆ. ಸಮತೂಕವೆ ಯೋಗ. ಇನ್ನು ಭೋಗಯೋಗದ ಜಿಜ್ಞಾಸೆ.

ಮಾನವನು ದೇಹಧಾರಿಯಾದುದರಿಂದ ಅವನ ನಿಜಸ್ವರೂಪ ಜಿಜ್ಞಾಸೆ ಮೊದಲು:

ಮಾನವನಾರು? ದೇಹವುಳ್ಳ ಮನವೊ? ಮನವುಳ್ಳ ದೇಹವೊ? ಹೇಳುವಗೆ ಹೊಳೆಯದ, ಕೇಳುವಗೆ ತಿಳಿಯದ ಈ ದೇಹದೇಹೀ ವಾದವನ್ನು ದಾರ್ಶನಿಕರು ಮಾಡಲಿ. ಮನವೆಂಬುದು ದೇಹಕ್ಕಂಟಿಕೊಂಡ ನಿರರ್ಥಕ ಉಪಾಧಿ ಎಂದು ಒಂದು ಅಭಿಪ್ರಾಯ (Behaviourists, Epiphenomenalists) ಮನವೆ ಅರ್ಥಾತ್ ಜೀವಾತ್ಮ ಅಮರ ತತ್ವವಿದ್ದು ದೇಹ ಇದು ಆತ್ಮನಿಗೆ ಪಾಪದಿಂದಲೊ, ಅವಿದ್ಯೆಯಿಂದಲೊ ಅಂಟಿಕೊಂಡ ಒಂದು ಸೆರೆಮನೆಯಂದದಿ ಆಗಂತುಕ ಉಪಾಧಿ ಎಂದು ಚೈತನ್ಯವಾದಿಗಳ ವಾದ. ಒಂದನ್ನೊಂದು ಇದಿರಿಸುವ ಈ ವಾದಗಳು ಒಂದಕ್ಕೊಂದು ಮದ್ದು. ಇವರ ಮಾತು ತನ್ನ ನಾಲಿಗೆಯಿಂದ ತನಗೆ ನಾಲಿಗೆಯೆ ಇಲ್ಲವೆಂದು ಹೇಳುವಷ್ಟು ಸಮಂಜಸವಾಗಿವೆ!

ದೇಹಕ್ಕೆ ಗಾಯವಾದರೆ ಮನೋವ್ಯಥೆ, ಮಾನಸಿಕ ಚಿಂತೆ ಕಾಯದಾರೋಗ್ಯಕ್ಕೆ ಬಾಧಕವಾಗುವುದು. ಹೀಗೆ ದೇಹ ಮನಸುಗಳ ಅನ್ಯೋನ್ಯಾಶ್ರಯ ಸಂಬಂಧವು ಅನುಭವಸಿದ್ಧವೆ. ಈ ಶಂಕಾತೀತ ವಾಸ್ತವತೆಯನ್ನು ಗಮನಿಸಿ (Interactionism) ಬುದ್ಧಿವಂತನು ತಾನು ಮನೋದೇಹಿ ಆದುದರಿಂದ ಎರಡೂ ಅಂಗಗಳ ಸಮತೂಕ ವಿಕಾಸಕ್ಕಾಗಿ ಯತ್ನಿಸುವನು.

**ನಿನ್ನ ವಯಸೇನಣ್ಣ? । ನೀನೇನು ಸಣ್ಣವನೇ?**
**ತನುವಿನಾ ನಿನ್ನ ಯುಗಂಗಳ ಉತ್ಕ್ರಾಂತಿ**
**ನೀನೆಂತು ಸಣ್ಣ ಮರ್ಮಜ್ಞ ॥ ೧ ॥**

ತುಚ್ಛ ಬಗೆ ಬೇಡ ತನು। ಹುಚ್ಚ ರೂಢಿಯ ಕಚ್ಚಿ
ಊಚ ಜೀವಾತ್ಮ ಮೆಚ್ಚುವಾ ಪ್ರಾಸಾದ
ನೀಚವೆಂತಯ್ಯ ಮರ್ಜ್ಞ ॥ ೨ ॥

ಮಾನವೀ ಚೈತನ್ಯ। ತನುವಿನಾ ಜಕ್ಕಣನು
ತನುಬಿಟ್ಟ ಜೀವ ನಷ್ಟಾದ ಹುಟ್ಟಿನಾ
ಜೇನಿನಂತಕ್ಕು ಮರ್ಜ್ಞ ॥ ೩ ॥

ಕಾಯ ಸಾಯುವುದೆಂದು। ಶ್ರೇಯವಲ್ಲವದಂತೆ!
ಮಾಯವೇ ಸೃಷ್ಟಿಸೌಂದರ್ಯ ಕಾಯಗಳು
ಸಾಯದಿರೆ ಇಲ್ಲಿ ಮರ್ಜ್ಞ! ॥ ೪ ॥

ಸಾಯುವಾ ಕಾಯವಿದು। ಕಾಯುವುದು ಸಾಯದನ!
ಸಾಯದನ ತಾನು ಸಾಯುತಾ ಕಾಯುವುದು
ಕಾಯಕದ ವೀರ ಮರ್ಜ್ಞ! ॥ ೫ ॥

ದೇಹ ಸೆರೆಮನೆಯಾಗೆ। ದೇಹಿ ಹೊರಗಣ ಕಳ್ಳ!!
ದೇಹದಲಿ ಬಾಳಿ ದೇಹದ್ರೋಹಿಯಾಗುವ
ದೇಹದಲಿ ಬದ್ಧ ಮರ್ಜ್ಞ! ॥ ೬ ॥

ದೇಹದೇಹಿ ವಿರೋಧ। ದೇಹದ್ರೋಹಿಯ ವಾದ!
ದೇಹ ಸಹಕಾರ್ಯ ನೀಡದಿರೆ ದೇಹಿಯಾ
ದೇಹ ಯಮಧಾನಿ ಮರ್ಜ್ಞ ॥ ೭ ॥

ಸಾವಿಗಂಜುವ ಹೇಡಿ। ಜೀವಿಸುವ ಹೆಣ ಕಾಣು!
ಸಾವುನೋವಾದಿ ಲೆಕ್ಕಿಸದ ರಣವೀರ
ಸಾವಿನಾ ಮಿಂಡ ಮರ್ಜ್ಞ ॥ ೮ ॥

# ೧೦. ಭೋಗ ಮತ್ತು ತ್ಯಾಗ

## ಭೋಗವೀರನ ಬಾಳು

ಭೋಗ್ಯದಾ ಉಪಭೋಗ। ಭೋಗವೀರನ ಭಾಗ್ಯ
ಭೋಗದಲಿ ತಕ್ಕ ತ್ಯಾಗವನು ಮಾಡುವನೆ
ಭೋಗದಾ ವೀರ ಮರ್ಮಜ್ಞ ॥ ೧ ॥

ಅದು ಚಂದ ಇದು ಸಂಪು। ಅದು ಇಂಪು ಇದು ಕಂಪು
ಇದು ಕೇಳು ಏಳ್ಗೆಯಾ ಕಹಳೆ, ಭೋಗದೀ
ಕುದುರೆ ನೀನೇರು ಮರ್ಮಜ್ಞ ॥ ೨ ॥

ಭೋಗದಾ ತುರಂಗವು। ಯೋಗಿಯಾಗೇರಣ್ಣ!
ಯೋಗದಾ ನಿನ್ನ ಕಡಿವಾಣ ಸಡಿಲಾಗೆ
ರೋಗಿಯೇ ನೀನು ಮರ್ಮಜ್ಞ ॥ ೩ ॥

ಕಾಮದಾ ದಾಸ್ಯವೇ। ಕಾಮಾರ್ಥಿಯಾ ಶತ್ರು
ಕಾಮವೇ ನಮ್ಮ ಪ್ರಚೋದಕ, ಸಂಯಮಿತ
ಕಾಮ ಸನ್ಮಿತ್ರ ಮರ್ಮಜ್ಞ ॥ ೪ ॥

ಸಾನಂದ ವಿಶ್ವದಲಿ। ಆನಂದಕಂದ ನೀ
ಆನಂದವಾದದಲಿ ಮಿಂದು ಎಂದಿಗೂ
ಆನಂದವಾಳು ಮರ್ಮಜ್ಞ ॥ ೫ ॥

ಭೃಗುವಾಗು ಜಿಜ್ಞಾಸು। ಯೋಗಕೋವಿದ ಜನಕ
ತ್ಯಾಗದಾ ಕರ್ಣ ಶ್ರೀಕೃಷ್ಣನಾ ಕಾಣು
ಭೋಗದಲಿ ನಿತ್ಯ ಮರ್ಮಜ್ಞ ॥ ೬ ॥

ಇಲ್ಲದಕೆ ಒಲ್ಲೆನುವ। ಕಾಲ ಹಿಂದಣದಣ್ಣ!
ಬಲ್ಲಿದರೆ ತಿಂದು ಇಲ್ಲದವರು ಒಲ್ಲೆನುವು
ದಲ್ಲವೀ ಕಾಲ ಮರ್ಮಜ್ಞ ॥ ೭ ॥

ಭೋಗವೀರನಿಗಷ್ಟೆ। ತ್ಯಾಗವೀರನ ಪಟ್ಟ
ಭೋಗದಾ ನೈಜ ಉಣ್ಣುವಗೆ ಸಮತೂಕ
ಯೋಗವೇ ಬೇಕು ಮರ್ಮಜ್ಞ ॥ ೮ ॥

ಸಾಕು ಸಾಕೆನಬೇಡ । ಬೇಕೆನ್ನು ಬೇಕಾಗೆ
ಬೇಕಿಲ್ಲಭಾವ ವೈರಾಗ್ಯ; ಬೇಕೆಂಬ
ಸಾಕೆಂಬುದೇಕೆ ಮರ್ಮಜ್ಞ? ॥ ೯ ॥

ಮಂತ್ರಗಳು ಇನ್ನೇಕೆ? । ಯಂತ್ರಗಳ ಕಾಲವಿದು
ಯಂತ್ರಗಳ ಮುಂದೆ ಆವುದೇ ಮಂತ್ರದಾ
ತಂತ್ರಗಳತಂತ್ರ ಮರ್ಮಜ್ಞ! ॥ ೧೦ ॥

ಅಣ್ವಸ್ತ್ರಗಳನ್ನು ಮಂತ್ರಗಳಿಂದ ಅಪ್ರಭಾವಿ ಮಾಡುವ ಮಾಂತ್ರಿಕರುಂಟೆ? ಯಜ್ಞವಿಶಾರದರೆ, ತೋರಿಸಿರಿ ನಿಮ್ಮ ಮಂತ್ರಪ್ರಭಾವ!

ಸವಿಯಿನ್ನು ಇರುವಾಗ । ಸಾವು ಹೊಂದುವ ಧನ್ಯ
ನೋವಿನಿಂ ಬೆಂದು ಸಾಯುತಾ ಬಾಳುವನ
ಸಾವಿನಾ ಬಾಳು ಮರ್ಮಜ್ಞ ॥ ೧೧ ॥

ಭಯವಿಲ್ಲ ನಮಗಿಂದು । ಭಯವುಂಟು ನಮಗೊಂದು
ನ್ಯಾಯ ದಯೆ ಪ್ರೀತಿ ನಮ್ಮಗಳ ಕುಸಿವುವೋ
ಭಯವಿಂತು ನಮ್ಮ ಮರ್ಮಜ್ಞ ॥ ೧೨ ॥

ಬಂಧನವೆ ನಮಗಿಲ್ಲ । ಬಂಧನವು ಇದು ಒಂದೆ
ಬಂಧುಗಳ ಎಲ್ಲ ನೆಮ್ಮದಿಯ ಕಾಯುವಾ
ಬಂಧನವಿದೊಂದು ಮರ್ಮಜ್ಞ ॥ ೧೩ ॥

ಭೋಗಕ್ಕೆ ಮನಸೋತು । ತ್ಯಾಗಿಯಾ ವೇಷವೇ?
ತ್ಯಾಗದಾ ನಾಟಕವ ಬಿಟ್ಟು ನೀನಾಗು
ಭೋಗದಾ ಯೋಗಿ ಮರ್ಮಜ್ಞ ॥ ೧೪ ॥

ದಾರಿದ್ರ್ಯದಾ ಕಂದ । ನೈರಾಶ್ಯದಾ ವಾದ
ದಾರಿದ್ರ್ಯಮರ್ದನರು ನಾವು; ನಮಗೇಕೆ
ನೈರಾಶ್ಯವಾದ ಮರ್ಮಜ್ಞ? ॥ ೧೫ ॥

ಸುಖದ ಬೇಟೆಯಾಡುವ । ಸಖನೆ ನೀ ತುಸುಕೇಳು
ಸುಖವಿದ್ದ ಇಲ್ದ ಬಾಂಧವರ ಸಖನಾಗಿ
ಸುಖಿಯಾಗು ನಿತ್ಯ ಮರ್ಮಜ್ಞ ॥ ೧೬ ॥

ವೈವಾಹಿಕ ಜೀವನದಲ್ಲಿ ಅಹಂಮನ್ಯ ಸತಿಪತಿಗಳು ಎಂದೂ ಸುಖಿಯಾಗಲಾರರು. ನಾ ಹೆಚ್ಚು ಎನ್ನುವ ಹುಚ್ಚ. ನೀ ಹೆಚ್ಚು ಎನ್ನುವ ಜಾಣ.

ಪ್ರಣಯಕ್ಷೇತ್ರದಲ್ಲಿ ಅಹಂಕಾರಕ್ಕೆ ಇಂಬಿಲ್ಲ. ಅಹಂಮನ್ಯನು ಜಾಣನಾದರೆ ಮದುವೆಯಾಗಬಾರದು. ಜಾಣ ಸತಿಪತಿಗಳಲ್ಲಿ ಈ ತೆರದ ಸ್ಪರ್ಧೆ ಕಂಡು ಬರುವುದು!

ಸತಿಯೆ ಮೇಗೆಂಬ ಪತಿ । ಪತಿಯೆ ಮೇಗೆಂಬ ಸತಿ
ಪತಿಪತ್ನಿ ಇಂತು ಕೂಡಿದಡೆ ಸಂತಸಕೆ
ಮಿತಿಯುಂಟೆ ಪೇಳು ಮರ್ಮಜ್ಞ ! ॥ ೧೭ ॥

ಹೆಗ್ಗಲಿಯು ಬಾಳಿನಾ । ಒಗ್ಗಳಿಗೆಯೂ ಸಾಕು
ಕುಗ್ಗಿನಾ ಮುಗ್ಗ ಶತಕದಿಂ ದಶಕವೇ
ಹಿಗ್ಗಿನಾ ಲೇಸು ಮರ್ಮಜ್ಞ ॥ ೧೮ ॥

(ರಸಿಕನಾ ಹಸಿವು)

ಹೊಟ್ಟೆ, ಬಟ್ಟೆ, ಬಸತಿ, ಕಾಯಕ ಇವುಗಳ ಚಿಂತೆ ತಪ್ಪಿದ ಮಾತ್ರಕ್ಕೆ ನಮ್ಮ ವ್ಯಕ್ತಿಮತ್ತೆಯ ಸರ್ವಾಂಗಸುಂದರ ವಿಕಾಸವಾಗದು. ಸಾಹಿತ್ಯ, ಸಂಗೀತ, ಶಿಲ್ಪ ಮುಂತಾದವುಗಳ ರಸಗ್ರಹಣವೂ ಸುಸಂಸ್ಕೃತ ಜೀವನಕೆ ಆವಶ್ಯಕ. ಜೀವನಕೆ ಸೌಂದರ್ಯ, ಮಾಧುರ್ಯ, ಲಾಲಿತ್ಯ ಬೇಕು.

ಹಸಿವು ಹೊಟ್ಟೆಗಷ್ಟೆಯೆ? । ರಸಬೇಕು ರಸಿಕಂಗೆ
ಹಸಿವಿನಾ ಅನ್ನ ನೀಡದಿರೆ ರಸಿಕಂಗೆ
ಕಸ ನೀಡಿದಂತೆ ಮರ್ಮಜ್ಞ ॥ ೧೯ ॥

ನಾಟಕದ ವೈಶಾಲ್ಯ । ಉಂಟೆ ಇನ್ನಾವುದಕೆ ?
ಸಟೆ ರಂಗಲೋಕದಲಿ ಲೋಕದಾಟವನೆ
ದಿಟವಾಗಿ ನೋಡು ಮರ್ಮಜ್ಞ ॥ ೨೦ ॥

ಒಲಿದಾತ ಒಲಿಸನೇ? । ಕಲಿವಾತ ಕಲಿಸನೇ ?
ನಲಿಯುವಾ ನಲ್ಲ ನಲಿಸನೇ? ಸಾಹಿತಿಯು
ಎಲ್ಲಿದನು ಬಲ್ಲ ಮರ್ಮಜ್ಞ ॥ ೨೧ ॥

ಕಾವ್ಯಮೋಹವಿಮುಕ್ತ । ನಾವನವ ಎದೆಗಾರ !
ಕವಿಯ ಕೈವಾಡ ಮರ್ಕಟಗು, ತಾರ್ಕಿಕಗು
ಕೋವಿದಗು ರಮ್ಯ ಮರ್ಮಜ್ಞ ॥ ೨೨ ॥

ಬಣ್ಣದಾ ಚಿತ್ರಗಳು । ತಣಿಸುವಾ ಮೂರ್ತಿಗಳು
ವೀಣೆಯಾ ವಾದ್ಯ, ವಾಣಿಯಾ ಸಂಗೀತ
ಕಣ್ಣುಕಿವಿಯೂಟ ಮರ್ಮಜ್ಞ ॥ ೨೩ ॥

**ಲಲಿತವೀ ಕಲಾಗಣ । ಚೆಲುವಿನಾ ಕುಲವೊಂದು**
**ಶಿಲೆಶಿಲ್ಪ ಹೆಪ್ಪುಗಟ್ಟಿದಾ ಸಂಗೀತ**
**ಕಲ್ಲಾದ ಕಾವ್ಯ ಮರ್ಮಜ್ಞ** ॥ ೨೪ ॥

"Architecture is frozen music"–Ruskin. ಜೀವನದ ಚೆಲುವನ್ನು ಉಣಲೊಲ್ಲದ ರಸಿಕಂಗೆ ಹಿತೋಕ್ತಿ:—ಶೀಲವಿಲಯವಾಗದ ತೆರದಲ್ಲಿ ಕಾಮಪ್ರವೃತ್ತಿಯನ್ನು ಸಂತೈಸಬೇಕು ಯುವಕಯುವತಿಯರು. ಕಾವಿನಿಂದ ಬೆಣ್ಣೆ ಕರಗುವಂತೆ ಪ್ರಕೃತಿ ವಿರುದ್ಧ ಕೃತಕ ವಿರಕ್ತಿಯು ಖಂಡಿತವಾಗಿ ಸೋಲುವುದು!

**ಚೆಲುವಿನಾ ನಲ್ಲನಾ । ನೊಲ್ಲೆಂಬ, ಎಲ, ನಲ್ಲೆ**
**ಗಲ್ಲದಾ ಮೇಲೆ ನಲ್ಮೆ ಮುದ್ರೆಯನೊತ್ತಿ**
**ಗೆಲ್ಲುವನು ನಲ್ಲ ಮರ್ಮಜ್ಞ !** ॥ ೨೫ ॥

ಗಾಳಿ, ನೀರು, ಎಲೆಗಳ ಮೇಲೆ ತಪಸ್ಸು ಆಚರಿಸಿದ ವಿಶ್ವಾಮಿತ್ರ, ಪರಾಶರ, ಪ್ರಭೃತಿ ಮುನಿಗಳೂ ಇಂದ್ರಿಯನಿಗ್ರಹದಲ್ಲಿ ಸೋತರು. ನಿತ್ಯ ಕಾಮೋದ್ದೀಪಕ ಖಾದ್ಯಪೇಯಗಳ ಭಕ್ತರಾದ ನಮ್ಮಗಳ ಪಾಡೇನು! ಜೀವನದ ಸವಿಯನ್ನುಣ್ಣುವುದು ನಮ್ಮ ಕರ್ತವ್ಯ. ಪಾರಂಪರಿಕ ನೈರಾಶ್ಯವನ್ನೆತ್ತಿ ಬಾಳು ನೀರ್ಗುಳ್ಳೆಯೆನ್ನುತ್ತ ಜೊಳ್ಳು ವೈರಾಗ್ಯ ನಟಿಸುವವರು ಸಮಾಜ ಕಂಟಕರಾಗುವುದುಂಟು. ಮಿಥ್ಯಾಚಾರ ಅಕ್ಷಮ್ಯ!!

**ರೋಗದಾ ಆಚೆಗಣ । ಭೋಗಯೋಗದ ಬಾಳು**
**ಅಂಗಗಳ ಎಲ್ಲ ಸಮತೂಕ ಪುಷ್ಟಿಯೇ**
**ಭೋಗದಾ ಯೋಗ ಮರ್ಮಜ್ಞ** ॥ ೨೬ ॥

**ಹೇಮಾರ್ಥಿ ಸಿರಿಯಾಳು । ಕಾಮಾರ್ಥಿ ಲಕ್ಷ್ಮೀಶ**
**ಕಾಮುದಾ ಯೋಗ ಸ್ವಾರ್ಥಪರಮಾರ್ಥಗಳ**
**ಸಮನ್ವಯ ಕಾಣು ಮರ್ಮಜ್ಞ** ॥ ೨೭ ॥

**ಪೂರ್ಣ ಬಾಳನು ಬಾಳಿ । ಪೂರ್ಣ ಮಾನವನಾಗು**
**ವರ್ಣವರ್ಗಾದಿ ವೈಷಮ್ಯ ಸಾಮ್ಯದಾ**
**ಪೂರ್ಣದಲಿ ಜೀರ್ಣ ಮರ್ಮಜ್ಞ** ॥ ೨೮ ॥

ಇಂತು ಪೂರ್ಣ, ಸರ್ವಾಂಗಸುಂದರವಿಕಾಸಾತ್ಮಕ ಮಾನವತೆ ನಮ್ಮ ಬಾಳಿನ ಹೆಗ್ಗುರಿ. ಇನ್ನು ದರ್ಶನಶಾಸ್ತ್ರ Metaphysics Philosophy—ವೇದಾಂತದ ವಿಚಾರ.

# ೧೧. ದರ್ಶನಶಾಸ್ತ್ರ— ವೇದಾಂತ
# ಇಲ್ಲವೆ ಸತ್ಯಜಿಜ್ಞಾಸೆ

ನಾನು ಯಾರು? ನೀನು ಯಾರು? ನಮ್ಮೆಲ್ಲರಲ್ಲಿ 'ನಾನು' ಎಂಬ ಅರಿವು ಇದೆ. 'ನಾನು' 'ನೀನು' ಎಂಬ ಭೇದವು ಸತ್ಯವೊ? ಇಲ್ಲವೆ ಭಿನ್ನಭಿನ್ನ ದೇಹಗಳ ಉಪಾಧಿಗಳ ಪರಿಣಾಮವೊ? ನನ್ನ ನೋವು ನನಗಷ್ಟೆ ಎನಿಸುವುದು. ನಿನ್ನ ನೋವು ನಿನಗೆ. ಭೇದ ಸುಳ್ಳಲ್ಲ. ಆದರೆ ನೀವು ಎಲ್ಲರೂ ಭಿನ್ನರಾದರೂ ನಾವೆಲ್ಲ ಮಾನವರೆ, ಎಂದ ಮೇಲೆ ಭಿನ್ನರಾದ ನಮ್ಮಲ್ಲಿ ಮಾನವತೆ ಎಂಬ ಅಭೇದವೂ ಇದೆ. ಅದನ್ನು ಅಲ್ಲಗಳೆಯಲು ಬರುವುದಿಲ್ಲ. ಅಭೇದವೂ ಸತ್ಯವೆನ್ನುವಂತೆ ತೋರುತ್ತದೆ. ಅಂತೂ ನಮ್ಮಲ್ಲಿ ಭೇದವಿದ್ದುದೂ ನಿಜ. ಭೇದವಿಲ್ಲದಿರುವದೂ ನಿಜ. ಇವು ಒಂದಕ್ಕೊಂದು ವಿರುದ್ಧ ಮಾತುಗಳು! ಈ ವಿರೋಧವು ಸತ್ಯವೊ? ವಿರೋಧವು ಸತ್ಯವಾದರೆ ಭೇದ ಮತ್ತು ಅಭೇದ ಇವೆರಡರಲ್ಲಿ ಒಂದು ಸತ್ಯ ಮತ್ತೊಂದು ಅಸತ್ಯವಿರಬೇಕಾಯಿತು. ಯಾವುದು ಸತ್ಯ? ಯಾವುದು ಮಿಥ್ಯ? ಅಥವಾ ಇವು ಎರಡೂ ಪ್ರತ್ಯಕ್ಷ ಪ್ರಮಾಣಗಳ ಆಶ್ರಯ ಹೊಂದಿರುವ ಕಾರಣ ಅವೆರಡರಲ್ಲಿಯೂ ಅಂಶತಃ ಸತ್ಯವಿದೆ ಎಂದು ನಂಬಬಹುದೊ?

ಈ ತೆರದ ಮೂಲಭೂತ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ (Problems) ಸಮಾಧಾನಕಾರಕ ಉತ್ತರಗಳನ್ನು ಕೊಡುವ ಪ್ರಯತ್ನವೆ ಸತ್ಯದರ್ಶನ ಅಥವಾ ತತ್ವಜಿಜ್ಞಾಸೆ. ತತ್ವಜ್ಞಾನ ಎಂಬ ಶಬ್ದಪ್ರಯೋಗವು ಉಚಿತವಲ್ಲ ಎಂದು ನನ್ನ ಅಭಿಪ್ರಾಯ. ಸಂಪೂರ್ಣ ಸತ್ಯದರ್ಶನ ಯಾರಿಗೂ ಆಗಿಲ್ಲ, ಆಗಲಾರದು. ದರ್ಶನಶಾಸ್ತ್ರವೆಂದರೆ ಸಂದೇಹ (Philosophy is doubt) ಎಂಬ ಮಾತು ತಥ್ಯಪೂರ್ಣವಿದೆ. ಸಂದೇಹವು ದಾರ್ಶನಿಕನ ಪ್ರಾಣ, ಉಸಿರು. ಸಂದೇಹವೆ ಜಿಜ್ಞಾಸೆಯ, ಅರಿಯುವ ಬಯಕೆಯ ಪ್ರಚೋದಕ. ಆದಿಯಿಂದ ಕೊನೆಗೂ ದಾರ್ಶನಿಕನು ಜಿಜ್ಞಾಸು, ಜ್ಞಾನಿಯಲ್ಲ. ದರ್ಶನವೆಂದರೆ ಸತ್ಯದರ್ಶನಯತ್ನ, ಸತ್ಯಜಿಜ್ಞಾಸಾ.

ವಿಸ್ತಾರಭಯದಿಂದ ಪ್ರಪಂಚದ ದರ್ಶನಸಾಹಿತ್ಯದ ಅತಿ ಅಲ್ಪ ಪರಿಚಯವನ್ನು ಕೂಡ ಮಾಡಿಕೊಡಲು ಇಲ್ಲಿ ಅವಕಾಶವಿಲ್ಲ. ಪಶ್ಚಿಮ ಗೋಲಾರ್ಧ

**ಲಲಿತವೀ ಕಲಾಗಣ । ಚೆಲುವಿನಾ ಕುಲವೊಂದು**
**ಶಿಲೆಶಿಲ್ಪ ಹೆಪ್ಪುಗಟ್ಟಿದಾ ಸಂಗೀತ**
**ಕಲ್ಲಾದ ಕಾವ್ಯ ಮರ್ಮಜ್ಞ** ॥ ೨೪ ॥

"Architecture is frozen music"–Ruskin. ಜೀವನದ ಚೆಲುವನ್ನು ಉಣಲೊಲ್ಲದ ರಸಿಕಂಗೆ ಹಿತೋಕ್ತಿ:—ಶೀಲವಿಲಯವಾಗದ ತೆರದಲ್ಲಿ ಕಾಮಪ್ರವೃತ್ತಿಯನ್ನು ಸಂತೈಸಬೇಕು ಯುವಕಯುವತಿಯರು. ಕಾವಿನಿಂದ ಬೆಣ್ಣೆ ಕರಗುವಂತೆ ಪ್ರಕೃತಿ ವಿರುದ್ಧ ಕೃತಕ ವಿರಕ್ತಿಯು ಖಂಡಿತವಾಗಿ ಸೋಲುವುದು!

**ಚೆಲುವಿನಾ ನಲ್ಲನಾ । ನೊಲ್ಲೆಂಬ, ಎಲ, ನಲ್ಲೆ**
**ಗಲ್ಲದಾ ಮೇಲೆ ನಲ್ಮೆ ಮುದ್ರೆಯನೊತ್ತಿ**
**ಗೆಲ್ಲುವನು ನಲ್ಲ ಮರ್ಮಜ್ಞ !** ॥ ೨೫ ॥

ಗಾಳಿ, ನೀರು, ಎಲೆಗಳ ಮೇಲೆ ತಪಸ್ಸು ಆಚರಿಸಿದ ವಿಶ್ವಾಮಿತ್ರ, ಪರಾಶರ, ಪ್ರಭೃತಿ ಮುನಿಗಳೂ ಇಂದ್ರಿಯನಿಗ್ರಹದಲ್ಲಿ ಸೋತರು. ನಿತ್ಯ ಕಾಮೋದ್ದೀಪಕ ಖಾದ್ಯಪೇಯಗಳ ಭಕ್ತರಾದ ನಮ್ಮಗಳ ಪಾಡೇನು! ಜೀವನದ ಸವಿಯನ್ನುಣ್ಣುವುದು ನಮ್ಮ ಕರ್ತವ್ಯ. ಪಾರಂಪರಿಕ ನೈರಾಶ್ಯವನ್ನೆತ್ತಿ ಬಾಳು ನೀರ್ಗುಳ್ಳೆಯೆನ್ನುತ್ತ ಜೊಳ್ಳು ವೈರಾಗ್ಯ ನಟಿಸುವವರು ಸಮಾಜ ಕಂಟಕರಾಗುವುದುಂಟು. ಮಿಥ್ಯಾಚಾರ ಅಕ್ಷಮ್ಯ!!

**ರೋಗದಾ ಆಚೆಗಣ । ಭೋಗಯೋಗದ ಬಾಳು**
**ಅಂಗಗಳ ಎಲ್ಲ ಸಮತೂಕ ಪುಷ್ಟಿಯೇ**
**ಭೋಗದಾ ಯೋಗ ಮರ್ಮಜ್ಞ** ॥ ೨೬ ॥

**ಹೇಮಾರ್ಥಿ ಸಿರಿಯಾಳು । ಕಾಮಾರ್ಥಿ ಲಕ್ಷ್ಮೀಶ**
**ಕಾಮದಾ ಯೋಗ ಸ್ವಾರ್ಥಪರಮಾರ್ಥಗಳ**
**ಸಮನ್ವಯ ಕಾಣು ಮರ್ಮಜ್ಞ** ॥ ೨೭ ॥

**ಪೂರ್ಣ ಬಾಳನು ಬಾಳಿ । ಪೂರ್ಣ ಮಾನವನಾಗು**
**ವರ್ಣವರ್ಗಾದಿ ವೈಷಮ್ಯ ಸಾಮ್ಯದಾ**
**ಘೂರ್ಣದಲಿ ಜೀರ್ಣ ಮರ್ಮಜ್ಞ** ॥ ೨೮ ॥

ಇಂತು ಪೂರ್ಣ, ಸರ್ವಾಂಗಸುಂದರವಿಕಾಸಾತ್ಮಕ ಮಾನವತೆ ನಮ್ಮ ಬಾಳಿನ ಹೆಗ್ಗುರಿ. ಇನ್ನು ದರ್ಶನಶಾಸ್ತ್ರ Metaphysics Philosophy—ವೇದಾಂತದ ವಿಚಾರ.

# ೧೧. ದರ್ಶನಶಾಸ್ತ್ರ— ವೇದಾಂತ
# ಇಲ್ಲವೆ ಸತ್ಯಜಿಜ್ಞಾಸೆ

ನಾನು ಯಾರು? ನೀನು ಯಾರು? ನಮ್ಮೆಲ್ಲರಲ್ಲಿ 'ನಾನು' ಎಂಬ ಅರಿವು ಇದೆ. 'ನಾನು' 'ನೀನು' ಎಂಬ ಭೇದವು ಸತ್ಯವೊ? ಇಲ್ಲವೆ ಭಿನ್ನಭಿನ್ನ ದೇಹಗಳ ಉಪಾಧಿಗಳ ಪರಿಣಾಮವೊ? ನನ್ನ ನೋವು ನನಗಷ್ಟೆ ಎನಿಸುವುದು. ನಿನ್ನ ನೋವು ನಿನಗೆ. ಭೇದ ಸುಳ್ಳಲ್ಲ. ಆದರೆ ನೀವು ಎಲ್ಲರೂ ಭಿನ್ನರಾದರೂ ನಾವೆಲ್ಲ ಮಾನವರೆ, ಎಂದ ಮೇಲೆ ಭಿನ್ನರಾದ ನಮ್ಮಲ್ಲಿ ಮಾನವತೆ ಎಂಬ ಅಭೇದವೂ ಇದೆ. ಅದನ್ನು ಅಲ್ಲಗಳೆಯಲು ಬರುವುದಿಲ್ಲ. ಅಭೇದವೂ ಸತ್ಯವೆನ್ನುವಂತೆ ತೋರುತ್ತದೆ. ಅಂತೂ ನಮ್ಮಲ್ಲಿ ಭೇದವಿದ್ದುದೂ ನಿಜ. ಭೇದವಿಲ್ಲದಿರುವದೂ ನಿಜ. ಇವು ಒಂದಕ್ಕೊಂದು ವಿರುದ್ಧ ಮಾತುಗಳು! ಈ ವಿರೋಧವು ಸತ್ಯವೊ? ವಿರೋಧವು ಸತ್ಯವಾದರೆ ಭೇದ ಮತ್ತು ಅಭೇದ ಇವೆರಡರಲ್ಲಿ ಒಂದು ಸತ್ಯ ಮತ್ತೊಂದು ಅಸತ್ಯವಿರಬೇಕಾಯಿತು. ಯಾವುದು ಸತ್ಯ? ಯಾವುದು ಮಿಥ್ಯ? ಅಥವಾ ಇವು ಎರಡೂ ಪ್ರತ್ಯಕ್ಷ ಪ್ರಮಾಣಗಳ ಆಶ್ರಯ ಹೊಂದಿರುವ ಕಾರಣ ಅವೆರಡರಲ್ಲಿಯೂ ಅಂಶತಃ ಸತ್ಯವಿದೆ ಎಂದು ನಂಬಬಹುದೊ?

ಈ ತೆರದ ಮೂಲಭೂತ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ (Problems) ಸಮಾಧಾನಕಾರಕ ಉತ್ತರಗಳನ್ನು ಕೊಡುವ ಪ್ರಯತ್ನವೆ ಸತ್ಯದರ್ಶನ ಅಥವಾ ತತ್ವಜಿಜ್ಞಾಸೆ. ತತ್ವಜ್ಞಾನ ಎಂಬ ಶಬ್ದಪ್ರಯೋಗವು ಉಚಿತವಲ್ಲ ಎಂದು ನನ್ನ ಅಭಿಪ್ರಾಯ. ಸಂಪೂರ್ಣ ಸತ್ಯದರ್ಶನ ಯಾರಿಗೂ ಆಗಿಲ್ಲ, ಆಗಲಾರದು. ದರ್ಶನಶಾಸ್ತ್ರವೆಂದರೆ ಸಂದೇಹ (Philosophy is doubt) ಎಂಬ ಮಾತು ತಥ್ಯಪೂರ್ಣವಿದೆ. ಸಂದೇಹವು ದಾರ್ಶನಿಕನ ಪ್ರಾಣ, ಉಸಿರು. ಸಂದೇಹವೆ ಜಿಜ್ಞಾಸೆಯ, ಅರಿಯುವ ಬಯಕೆಯ ಪ್ರಚೋದಕ. ಆದಿಯಿಂದ ಕೊನೆಗೂ ದಾರ್ಶನಿಕನು ಜಿಜ್ಞಾಸು, ಜ್ಞಾನಿಯಲ್ಲ. ದರ್ಶನವೆಂದರೆ ಸತ್ಯದರ್ಶನಯತ್ನ, ಸತ್ಯಜಿಜ್ಞಾಸಾ.

ವಿಸ್ತಾರಭಯದಿಂದ ಪ್ರಪಂಚದ ದರ್ಶನಸಾಹಿತ್ಯದ ಅತಿ ಅಲ್ಪ ಪರಿಚಯವನ್ನು ಕೂಡ ಮಾಡಿಕೊಡಲು ಇಲ್ಲಿ ಅವಕಾಶವಿಲ್ಲ. ಪಶ್ಚಿಮ ಗೋಲಾರ್ಧ

ದಲ್ಲಿ ಪ್ರಾಚೀನ ದಾರ್ಶನಿಕ–ಕುಲಗುರು ಹುತಾತ್ಮಾ ಸಾಕ್ರೆಟಿಸ ತನ್ನದೇ ಆದ ಒಂದು ಸ್ವತಂತ್ರ ವಿಚಾರಸರಣಿಯಿಂದ ತನ್ನ ಸಮಕಾಲೀನ ಪಂಡಿತರ ಗರ್ವಭಂಗ ಮಾಡಿದನು. ನಾನು ಇದನ್ನು ಬಲ್ಲೆ, ನಾನು ಅದನ್ನು ಬಲ್ಲೆ ಎಂಬವರು ಯಾವದನ್ನೂ ವಾಸ್ತವದಲ್ಲಿ ಬಲ್ಲವರಲ್ಲವೆಂಬುದನ್ನು ಅವನು ತನ್ನ ತೀಕ್ಷ್ಣ ಪ್ರಶ್ನಸರಣಿಗೆ ತುತ್ತಾದವರಿಗೆ ತೋರಿಸಿ ಕೊಡುತ್ತಿದ್ದನು. ಇಂತು ಮುಖಭಂಗದಿಂದ ನೊಂದುಕೊಂಡ ತಥಾಖ್ಯಾತ ಪಂಡಿತರು ಸಾಕ್ರೆಟಿಸ್ ರೂಢ ಆಚಾರವಿಚಾರಗಳನ್ನು ನಷ್ಟಪಡಿಸುವ ಸಮಾಜಕಂಟಕನೆಂದು ಮುಂತಾಗಿ ಸತ್ತಾಧೀಶರಿಗೆ ಹೇಳಿ, ಅಂದಿನ ಶಿಷ್ಟಪದ್ಧತಿಯಂತೆ ನ್ಯಾಯ ವಿಚಾರಣೆಯ ನಾಟಕಮಾಡಿ, ಸಮಾಜಸ್ವಾಸ್ಥ್ಯಕ್ಕಾಗಿ ಸಾಕ್ರೆಟಿಸ್ ಹಲಾಹಲ ಕುಡಿದು ಸಾಯಬೇಕೆಂಬ ದಂಡನೆಗೆ ಅವನನ್ನು ಗುರಿಮಾಡಿದರು. ರೂಢ ವಿಚಾರ ಮತ್ತು ವಿಕಾರವಾಹಿನಿಗೆ ಅಡ್ಡ ಇಲ್ಲವೆ ಇದಿರು ಈಸಿದವರೆಲ್ಲ ಪ್ರಪಂಚದಲ್ಲಿ ಪ್ರಾಯಃ ಕಷ್ಟನಷ್ಟಕ್ಕೀಡಾಗಿದ್ದುಂಟು. ಪ್ರಪಂಚದಲ್ಲಿ ರೂಢಿ ದಾಸರೆ ಪ್ರಾಯಃ ಎಲ್ಲರೂ. ವಿಚಾರಕ್ರಾಂತಿಯ ಪ್ರವರ್ತಕರು ಸಮ ಕಾಲೀನರಿಗೆ ಸಮಾಜಕಂಟಕರು, ಮುಂದಿನವರಿಗೆ ಪೂಜ್ಯ ವಿಭೂತಿಗಳು. ಕಣಾದ, ಕಪಿಲ, ಬುದ್ಧ, ಮಹಾವೀರ, ಎಸೂ, ಮಹಮ್ಮದ, ಗುರುನಾನಕ, ಬಸವೇಶ್ವರ, ವೈಕ್ಲಿಫ್, ಮಾರ್ಟಿನ್, ಲೂಥರ ಮುಂತಾದವರು ಆಯಾ ಕಾಲದ ಕ್ರಾಂತಿಕಾರಕ ಸಮಾಜ ಸುಧಾರಕರು, ರೂಢಿಮೂಢರ ರೋಷಕ್ಕೆ ಗುರಿಯಾದವರು. ಆದರೆ ಕಾಲಾಂತರದಲ್ಲಿ ಆಯಾ ಸಾಂಪ್ರದಾಯಿಕ ಮತಾಭಿಮಾನಿಗಳಿಗೆ ವಂದ್ಯ ಮತಸ್ಥಾಪಕರಾದರು.

ವೈಚಾರಿಕ ಕ್ರಾಂತಿಗಾಗಿ ಹೆಸರಾದ ಬುದ್ಧಪ್ರಭೃತಿ ಉಪದೇಶಕರ ಅಭಿ ಮಾನಿಗಳಲ್ಲಿ ಅವರ ಪೂಜ್ಯ ಮತಸ್ಥಾಪಕರ ವಿಚಾರ ಸ್ವಾತಂತ್ರ್ಯವು ಮಾತ್ರ ಅಪರೂಪವಾಗಿಯೆ ಕಂಡುಬರುವದಲ್ಲ! ಮಾತ್ರವಲ್ಲ, ತಮ್ಮ ಪೂಜ್ಯ ವಿಭೂತಿ ಗಳು ಅಂಧಶ್ರದ್ಧ ಮತನಿಷ್ಠೆ, ಸಾಂಪ್ರದಾಯಿಕ ದಾಸ್ಯ ಮುಂತಾದ ದೋಷ ಗಳನ್ನು ಖಂಡತುಂಡಾಗಿ ಟೀಕಿಸಿರುವುದರ ನೆನವೂ ಇವರಲ್ಲಿರುವುದಿಲ್ಲವಲ್ಲ! ನಮ್ಮ ಮತಸ್ಥಾಪಕನ ಅಭಿಪ್ರಾಯ ಹೀಗೆಯೆ, ಹಾಗಲ್ಲ ಎಂಬುವಾಗಿ ಮತ ಮೂಢರಲ್ಲಿ ಸಾಗುವ ಆವೇಶದ ಚರ್ಚೆ, ಬಡಿದಾಟ, ಹಲವು ಸಲ ರಕ್ತಪಾತ ಮುಂತಾದ ಅಧಾರ್ಮಿಕ ಮತ್ತು ಅದಾರ್ಶನಿಕ ಸಂಗತಿಗಳನ್ನು ಕಂಡು ಯಾರಿಗೆ ತಾನೆ ಸವಿಸ್ಮಯ ವಿಷಾದವಾಗಲಿಕ್ಕಿಲ್ಲ?

ದೀಕ್ಷಾಬಂಧನದಿಂದ ಮತಗಳನ್ನು ಅಂಗೀಕರಿಸಿ ವಂಶಪರಂಪರೆಯಿಂದ ಅವುಗಳನ್ನು ಮುಂದುವರಿಸುವ ಸಂಪ್ರದಾಯವು ಧರ್ಮಗ್ಲಾನಿಯ ಮತ್ತು ಅದಾರ್ಶನಿಕ ಮನೋವೃತ್ತಿಯ ಪ್ರಧಾನ ಕಾರಣವಾಗಿದೆ. ಹೊಲ ಮನೆ ಮುಂತಾದ ಸೊತ್ತು ಹಿರಿಯರಿಂದ ಕಿರಿಯರಿಗೆ ವಾರಸಾಧಿಕಾರದಿಂದ ಬರುವಂತೆ ಮತಗಳೂ ತಲೆಯಿಂದ ತಲೆಗೆ ಸಾಗುವ ಅನಿಷ್ಟ ಸಂಪ್ರದಾಯವು ತಮೋಯುಗದಲ್ಲಿ ಕ್ಷಮ್ಯವಾಗಿದ್ದರೂ ಇಂದಿನ ವೈಚಾರಿಕ ಸ್ವಾತಂತ್ರ್ಯದ ಕಾಲದಲ್ಲಿ ಅದು ತುಂಬಾ ಅಕ್ಷಮ್ಯ. ಹತ್ತರಿಂದ ಮೂರು ಕಳೆದರೆ ಏಳು ಉಳಿವುದೆಂಬ ಜ್ಞಾನವೂ ಇಲ್ಲದವರಿಗೆ ಮತದೀಕ್ಷೆ ಕೊಡುವಲ್ಲಿ ಯಾವ ಅರ್ಥವಿದೆ? ನಾಗರಿಕನ ಸಾಮಾಜಿಕ ಮತ್ತು ರಾಜಕೀಯ ದಾಸ್ಯವನ್ನು ಲೋಕಪ್ರಭುತ್ವವಾದಿಗಳು ಶಾಸನದಿಂದ ನಿಲ್ಲಿಸಿದ್ದಾರೆ. ಆದರೆ ವೈಚಾರಿಕದಾಸ್ಯವನ್ನು ನೀಡುವ ಈ ಧಾರ್ಮಿಕ ದೀಕ್ಷೆಗಳ ದಾನವೀ ಸ್ವರೂಪವು ನಮ್ಮ ಸ್ವಾತಂತ್ರ್ಯಪ್ರಿಯ ವ್ಯಕ್ತಿಸ್ವಾತಂತ್ರ್ಯವಾದಿಗಳ ಗಮನಕ್ಕೆ ಬಾರದಿದ್ದುದು ಸಖೇದಾಶ್ಚರ್ಯ. ಪ್ರಪಂಚದ ಎಲ್ಲ ನಾಡುಗಳಲ್ಲಿಯೂ ಪ್ರಬುದ್ಧರಲ್ಲದವರಿಗೆ ಮತದೀಕ್ಷೆಗಳನ್ನು ವಿಧಿಸುವ ಸಂಪ್ರದಾಯಕ್ಕೆ ಅಧಿಕೃತ ಘೋಷಣೆಯಿಂದ ಪ್ರತಿಬಂಧವಾಗಬೇಕು.

ಪರಂಪರಾದಾಸ್ಯದ ಪರಿಣಾಮವಾಗಿ ದೀಕ್ಷಾಬದ್ಧ ಪ್ರಪಂಚದ ಯಾವದೇ ನಾಗರಿಕನಿಗೆ ಯಾವ ಸಂಗತಿಯನ್ನೂ ಸ್ವತಂತ್ರವಾಗಿ ವಿಚಾರಿಸುವ ಧೈರ್ಯವಿಲ್ಲದಾಗಿದೆ. ಕಾರ್ಲಮಾರ್ಕ್ಸ ಕ್ರಾಂತಿಕಾರಕ ವಾದಪ್ರವರ್ತಕನಷ್ಟೇ. ಅವನ ಕ್ರಾಂತಿಕಾರಕ ತತ್ವಪ್ರಣಾಲಿಯನ್ನೆತ್ತಿದವರು ತಾವು ಸ್ವತಂತ್ರ ವಿಚಾರವುಳ್ಳವರೆಂದು ಹೇಳಿಕೊಳ್ಳುತ್ತಾರೆ. ಆದರೆ ಇವರಲ್ಲಿಯೂ ವಿಭೂತಿ ಪೂಜೆ ಮತ್ತು ತರ್ಕಪ್ರಾಪ್ತ ಪರಂಪರಾನಿಷ್ಠೆ ಇಲ್ಲದಿಲ್ಲ! ಕಾರ್ಲಮಾರ್ಕ್ಸನ ಅಭಿಪ್ರಾಯ ಇದುವೆ, ಅದಲ್ಲ ಎಂದು ಮುಂತಾಗಿ ತಾಳ್ಮೆಗೆಟ್ಟ ವಿವಾದಗಳು ಕಂಡುಬರುತ್ತವೆ. ಮಾರ್ಕ್ಸನ ಅಭಿಪ್ರಾಯ ಹೇಗೇ ಇರಲಿ, ಇದು ನನ್ನ ಅಭಿಪ್ರಾಯ ಎನ್ನುವ ಧೈರ್ಯ ಮಾರ್ಕ್ಸವಾದಿಗಳಲ್ಲಿಯೂ ಇಲ್ಲ!

ನಮ್ಮ ಭಾರತೀಯ ಭಾಷ್ಯಕಾರರ ಉದಾಹರಣೆಗಳೂ ಬಲು ಮನೋರಮ್ಯವಾಗಿವೆ. ಶಂಕರ ರಾಮಾನುಜಾದಿ ಪ್ರಸ್ಥಾನತ್ರಯದ ಭಾಷ್ಯಕಾರರು ತಮ್ಮ ಸಮಕಾಲೀನರಲ್ಲಿ ರೂಢವಾದ ಸಂಪ್ರದಾಯ ಮತ್ತು ದಾರ್ಶನಿಕ ವಾದವನ್ನು ಎದುರಿಸಿ ತಮ್ಮ ಮತಪ್ರಣಾಲಿಯನ್ನು ಮಂಡಿಸುವ ಧೈರ್ಯ ತೋರಿಸಿದ ಕ್ರಾಂತಿವೀರರೆ. ಆದರೆ ಇವರೆಲ್ಲರೂ ಒಂಟುಗಾಲಿನ ಬಂಟರು!

ಅದ್ವೈತ, ವಿಶಿಷ್ಟಾದ್ವೈತ ಮುಂತಾದ ತಮ್ಮ ದಾರ್ಶನಿಕ ವಾದಗಳನ್ನು ಯಾರ ಹಂಗಿಲ್ಲದೆ ಅತ್ಯಂತ ಪ್ರಭಾವೀ ರೀತಿಯಲ್ಲಿ ಪ್ರತಿಪಾದಿಸಿ, ತಮ್ಮ ವಾದ ಗಳಿಗೆ ಅಖಂಡ ತಾಳಿಕೆ ಬರುವಷ್ಟು ಅನುಯಾಯಿಗಳನ್ನು ಗಳಿಸಿದ ಅಸಾ ಮಾನ್ಯ ಪ್ರತಿಭೆಯ ಬಂಟರಿವರು. ಆದರೆ ಈ ಹೆಗ್ಗಲಿಗಳು ಕುಂಟರೆಂಬು ದನ್ನು ಕಂಡು ವಿಷಾದವೆನಿಸುತ್ತದೆ! ಸಮಕಾಲೀನರಿಗೆ ಕ್ರಾಂತಿಮಯವೆನಿ ಸುವ ತಮ್ಮ ವಾದವನ್ನು ಇವರು ತಮ್ಮ ಸ್ವತಂತ್ರ ಗ್ರಂಥದಲ್ಲಿಯೆ ಹೇಳಿ ದ್ದರೆ ಇವರು ಪೂರ್ಣ ಕ್ರಾಂತಿಕಾರಕರಾಗುತ್ತಿದ್ದರು. ಆದರೆ ಹಾಗೆ ಮಾಡಲು ಬೇಕಾದ ಸೌ ನಯೆ ಪೈಸೆ ಧೈರ್ಯ ಅವರಲ್ಲಿರಲಿಲ್ಲ! ಇವರೂ ದೀಕ್ಷಾಬದ್ಧ ವೇದ ಪ್ರಾಮಾಣ್ಯವಾದಿಗಳಷ್ಟೆ. ಅಂತೆಯೆ ಇವರು ತಮ್ಮ ವಾದಕ್ಕೆ ಉಪನಿಷತ್ತುಗಳ, ಬ್ರಹ್ಮಸೂತ್ರಗಳ ಮತ್ತು ಭಗವದ್ಗೀತೆಯ ಪುರಾಣ ಗಳ ಸಹ ಸಂಪೂರ್ಣ ಆಧಾರವಿದೆ ಎಂಬುದನ್ನು ತೋರಿಸಲು ಪ್ರದೀರ್ಘ ಭಾಷ್ಯಗಳನ್ನು ಬರೆದರು. ಶಬ್ದಪ್ರಮಾಣಕ್ಕೆ ಶರಣು ಹೋಗಿ ಈ ಬಂಟರು ಕುಂಟರಾದರು! ಪ್ರತಿಭಾಶಾಲಿ, ಅಸಾಮಾನ್ಯ ಪಂಡಿತರೂ ದೀಕ್ಷಾಬದ್ಧರಾದ ಕಾರಣ ಕುಂಟಬಂಟರಾದರೆಂದ ಮೇಲೆ ಸಾಮಾನ್ಯ ನಾಗರಿಕನು ಕಣ್ಣುಳ್ಳ ಕುರುಡ, ಕಾಲುಳ್ಳ ಹೆಳವ, ಮತಿಯುಳ್ಳ ಮೂಢನಾಗುವುದು ಪ್ರಕೃತಿ, ಆಗದಿರುವುದು ವಿಕೃತಿ!

ಅಂಧಶ್ರದ್ಧೆ ದಾರ್ಶನಿಕ ಕ್ಷೇತ್ರದಲ್ಲಿಯೂ ದಾಳಿಮಾಡಿದೆ. ಯಾರಿಗೂ ತಿಳಿಯದ ಶಬ್ದಾಡಂಬರದ ಮೊಟ್ಟೆಯೆಂದರೆ ದರ್ಶನಸಾಹಿತ್ಯ ಎಂಬ ಅಭಿಪ್ರಾಯ ರೂಢವಾಗಿದೆ. ಸುವಿಖ್ಯಾತ ಫ್ರೆಂಚ ದಾರ್ಶನಿಕ ವ್ಹಾಲ್ಟೇರನು ಈ ತೆರದ ದಾರ್ಶನಿಕ ವಿಚಾರಸರಣಿಯನ್ನು ಕಟುವಾಗಿ ಟೀಕಿಸಿರುವನು. ಅದರ ಅನುವಾದವನ್ನು ಈ ಆರಂಭದ ಮೂವಳಿಯಲ್ಲಿ ಕಾಣಬಹುದು.

**ಕೇಳುವಗೆ ತಿಳಿಯದಾ । ಹೇಳುವಗೆ ಹೊಳೆಯದಾ**
**ಗೋಳಿನೊಡನಾಟ ವೇದಾಂತ (Metaphysics) ಕೇಳಲೂ**
**ಹೇಳಲೂ ಕಷ್ಟ ಮರ್ಮಜ್ಞ !** ॥ ೧ ॥

**ವಿಶ್ವದಾ ರೂಪವಿದು । ಶಾಶ್ವತವೊ ನಶ್ವರವೊ**
**ಈಶ್ವರನೆ ಸರ್ವ ಆಗಿಹನೊ, ಮಾಡಿಹನೊ**
**ಈಶ್ವರನು ಪೇಳ ಮರ್ಮಜ್ಞ** ॥ ೨ ॥

**ವಿಶ್ವದಾ ಈಶ್ವರನು । ಈಶನೋ ಭಾಸನೋ**
**ಸೇಶ್ವರವೊ ವಿಶ್ವ ಸ್ವೇಶ್ವರವೊ ಆವನವ**
**ವಿಶ್ವದಲಿ ಬಲ್ಲ? ಮರ್ುಜ್ಞ** || ೩ ||

**ವೈಷಮ್ಯ ನೈರ್ಘೃಣ್ಯ । ದೋಷದೂಷಿತ ವಿಶ್ವ**
**ಸೇಶ್ವರವು ಎಂತು? ಅನಾದಿ ಸ್ವಸಂಘಟಿತ**
**ವಿಶ್ವಸ್ವಾಯತ್ತ ಮರ್ುಜ್ಞ** || ೪ ||

ಪ್ರಾಚೀನ ಸರ್ವಾಧಿಕಾರಿ, ದುರಾರಾಧ್ಯ ತಂಡಿನೊಡೆಯನ ಆದರ್ಶ ಮಾದರಿಯಲ್ಲಿ ಅಂದಿನರು ಜಗದೀಶರನನ್ನು ಕಲ್ಪಿಸಿರಲಿಕ್ಕೆ ಸಾಕು ಎಂದು ಹಲವರ ಅಭಿಪ್ರಾಯ.

**ತಂಡಿನೊಡೆಯನ ಅಣ್ಣ । ಪೊಡವಿಯಾ ಒಡೆಯನೇ !**
**ಅಡಿಯಲ್ಲಿ ಬಿದ್ದು ಬೇಡುವಗೆ ಕಣ್ದೆರೆದು**
**ನೋಡುವಾ ಸ್ವಾಮಿ ಮರ್ುಜ್ಞ** || ೫ ||

**ಕಾಣುವಾ ಭೂಪಾಲ । ಕಾಣದಾ ಜಗದೀಶ!**
**ಕಾಣುದರ ಮಾದರಿಯೆ ದೇವ ಸಗ್ಗಾದಿ**
**ಕಾಣದಾ ಸೃಷ್ಟಿ ಮರ್ುಜ್ಞ** || ೬ ||

**ಭೂಪಾಲ ಪ್ರತ್ಯಕ್ಷ । ಕೃಪಾನಿಧಿ ಕಾಣದಾ !**
**ಭೂಪರಾ ಗುಟ್ಟು ರಟ್ಟಾಗೆ ಆಗಿಹುದು**
**ಭೂಪರಾ ಲೋಪ ಮರ್ುಜ್ಞ** || ೭ ||

ರಾಜಾಪ್ರತ್ಯಕ್ಷದೇವತಾ ಎಂಬ ಮತ ಶಿಷ್ಟಸಂಮತವಾಗಿತ್ತು ನಿರಂಕುಶ ರಾಜಪ್ರಭುತ್ವದ ಕಾಲಖಂಡದಲ್ಲಿ! ಈಗ? ಸ್ವಯಂಪ್ರಜ್ಞೆಯಿಲ್ಲದ ರಾಜನಿಷ್ಠರಿಗೆ ರಾಜನಿಲ್ಲದೆ ರಾಜ್ಯ ಉಳಿಯಲು ಅಶಕ್ಯವೆಂದೆನಿಸುತ್ತಿತ್ತು. ಆದರೆ ಇಂದಿನ ಸ್ವಯಂಪ್ರಜ್ಞ ನಾಗರಿಕನಿಗೆ ಹಿಂದಿನರ ಆ ಕಲ್ಪನೆ ಹಾಸ್ಯಾಸ್ಪದವಾಗಿದೆ. ಪ್ರಬುದ್ಧ ಪ್ರಜಾಪ್ರಭುತ್ವದಲ್ಲಿ ರಾಜನು ಪದಚ್ಯುತನಾದಂತೆ, ಉಪಗ್ರಹಗಳನ್ನು ಕೂಡ ನಿರ್ಮಿಸುವ ಇಂದಿನ ವಿಜ್ಞಾನಯುಗದಲ್ಲಿ ಸರ್ವಜ್ಞ ಸರ್ವಸತ್ತಾಧೀಶ ಜಗದೀಶನ ಕಲ್ಪನೆ ಅಸಂಬದ್ಧವೆನಿಸುವುದು ಅಸ್ವಾಭಾವಿಕವಲ್ಲ.

**ವಿಶ್ವವಲ್ಲದ ಈಶ । ವಿಶ್ವವಾಳುವುದುಂಟೆ ?**
**ವಿಶ್ವದಂತಸ್ಥ ದೇವನಾ ಒಳಕೊಳ್ದ**
**ವಿಶ್ವ ಬಿಟ್ಟೀತೆ? ಮರ್ುಜ್ಞ** || ೮ ||

ವಿಶ್ವದಿಂದನ್ಯನಾ । ವಿಶ್ವೇಶನಿರಲಾರ
ವಿಶ್ವಸೂಲ್ತಾನ ಮೂಲ್ತಾನದಲಿ ಬಾಳಿ
ವಿಶ್ವವನು ಆಳ ಮರ್ುಜ್ಞ ॥ ೯ ॥

ಭೂಪ ಬೇಡೆಂಬುವಗೆ । ಶಾಪದಾ ಭಯ ಆಗ!
ಭೂಪರಾ ವಂಶ ದಿವ್ಯವೇ ಎಂಬ ಮತ
ಲೋಪವೇ ಈಗ ಮರ್ುಜ್ಞ ॥ ೧೦ ॥

ಕಾಣುವ ದೇವತೆಗಳೆಂದು ನಂಬಲಾದ ಅರಸರು ಜನಗಣದಲ್ಲಿ ವಿಲೀನರಾದಂತೆ ಜಗತ್ತಿನಲ್ಲಿ ಜಗದೀಶನ ವಿಲಿನೀಕರಣವಾಗಿದೆ ಈಗ.

ದಾಸ್ಯ ವೈಷಮ್ಯಗಳು । ಹಾಸ್ಯ ವಿಷಯಗಳಿಂದು
ದೇಶ ಜನಶಾಸ್ತ್ರ ಪ್ರಕೃತಿಯೆ. ಹಾಗೆಯೇ
ವಿಶ್ವಸ್ವಾಯತ್ತ ಮರ್ುಜ್ಞ ॥ ೧೧ ॥

ಈ ಲೋಕದೊಳ್ನಿಂತು । ಆ ಲೋಕದಾ ಚಿಂತೆ ?
ಭೂಲೋಕ ಕೂಡ ಅರಿಯದಾ ಪಂಡಿತಗೆ
ಸ್ವರ್ಲೋಕ ಗೊತ್ತೆ? ಮರ್ುಜ್ಞ ॥ ೧೨ ॥

ಲೋಷ್ಟಾಶ್ಮಜಾದಿಗಳ । ಸ್ಪಷ್ಟ ಕಲ್ಪನೆಯಿಲ್ಲ ।
ಸೃಷ್ಟಿಯಾ ಆಗುಹೋಗುಗಳ ಅವಗೆಂತು
ಅಷ್ಟಿಷ್ಟು ಗೊತ್ತು? ಮರ್ುಜ್ಞ ॥ ೧೩ ॥

ಒಳಗಣ್ಣು ಕಂಡಿತೇ? । ಒಳವಾಣಿ ಕೇಳಿತೇ ?
ಒಳಗಣಾ ಗುಟ್ಟು ಬಲ್ಲವಗೆ ಹೊರಗುಟ್ಟು
ತಿಳಿಯದೇ ಹೋಯ್ತು ! ಮರ್ುಜ್ಞ ॥ ೧೪ ॥

ಕಾಯವನು ಪೀಡಿಸುವ । ನೋಯಿಸುವ ಯೋಗಿಯೇ
ಕಾಯದಾ ನೋವು ನಿಲ್ಲಿಸುವ ಯೋಗದಾ
ಕಾಯಕದಿ ಬಾಳು ಮರ್ುಜ್ಞ ॥ ೧೫ ॥

ವಿಶ್ವದಾ ಜ್ಞಾನಕ್ಕೆ । ವಿಶ್ವವೇ ಉದ್ಗ್ರಂಥ
ಅಶ್ವಗಳ ಸಾಕಿ ನಲ್ಮೆಯಿಂದೇರುವನೆ
ಅಶ್ವಗಳ ಬಲ್ಲ ಮರ್ುಜ್ಞ ॥ ೧೬ ॥

ಕಾಯಕವ ತಪ್ಪಿಸಲು । ಮಾಯಿಕನ ಕಾಯಕವೆ?
ಮಾಯೆಯಾ ಯೋಗ ಸಾಧಿಸುವ ಯುಕ್ತಿಯನೆ
ಕಾಯಕಕೆ ನೀಡು ಮರ್ಜ್ಞ ॥ ೧೭ ॥

ಇಲ್ಲಿಯೇ ಸೋಲುವನು । ಅಲ್ಲಿ ಗೆಲ್ಲುವುದುಂಟೆ
ಇಲಿಯನ್ನು ಕಂಡು ಓಡುವನು ಆಡುವನೆ
ಹುಲಿಗಳಾ ಬೇಟೆ? ಮರ್ಜ್ಞ ॥ ೧೮ ॥

ಕಾಯ ಗುಳ್ಳಿಯೆಂದಡೆ । ಕಾಯ ಸುಳ್ಳಾಗುವುದೆ?
ಕಾಯ ಸುಳ್ಳೆಂಬ ಪಂಡಿತಗೆ ಮುಳ್ಳಿನಾ
ಗಾಯವೇ ಮದ್ದು ಮರ್ಜ್ಞ ॥ ೧೯ ॥

ಮಾಯೆಯೇ ಪ್ರಕೃತಿಯೇ? । ಮಾಯಿಯೇ ಮಹೇಶನೆ?
ಮಾಯೆಯೇ ವಿಶ್ವದಾಟಕ್ಕೆ ಹೊಣೆಯಾಗೆ
ಮಾಯಿ ಉಂಡಾಡಿ ಮರ್ಜ್ಞ! ॥ ೨೦ ॥

ಮಾಯೆಯನು ದಾಟುವಗೆ । ಮಾಯಿಯಾ ದರ್ಶನವೆ?
ಕಾಯದಾ ಅಜ್ಞ ಅವನೆಂತು ದಾಟುವನು
ಮಾಯೆಯನು ಇಲ್ಲಿ? ಮರ್ಜ್ಞ ॥ ೨೧ ॥

ಭೇದದಲಿ ಒಂದಿಹುದೊ । ಒಂದರಲಿ ಭೇದವೋ?
ಮೋದಖೇದಾದಿ ನಮ್ಮಗಳ ಭೇದದಲಿ
ಒಂದಲ್ವೆ ನಿತ್ಯ? ಮರ್ಜ್ಞ ॥ ೨೨ ॥

ಭಿನ್ನ ಮಾನವರಲ್ಲಿ । ಮಾನವತೆ ಒಂದಿಲ್ವೆ?
ನಾನಾತ್ವದಲ್ಲಿ ಐಕ್ಯವನು ಕಾಣುವಗೆ
ಬಿನ್ನಣವು ಒಂದು ಮರ್ಜ್ಞ ॥ ೨೩ ॥

ಒಂದರೋಳ್ ಭೇದವಿದೆ । ಒಂದುಂಟು ಭೇದದೋಳ್
ಭೇದದಾ ಒಂದು ನಲ್ಮೆಯಿಂದರಿವಂಗೆ
ಭೇದವೂ ಮೋದ ಮರ್ಜ್ಞ ॥ ೨೪ ॥

ಒಂದು ಆಧಾರ ಮಗ । ದೊಂದರಾ ವಿಶ್ವದಲಿ
ಮೇದಿನಿಯು ಕಂದ ಚಂದ್ರಮಾ, ಆದಿತ್ಯ
ಮೇದಿನಿಯು ತಾತ ಮರ್ಜ್ಞ ॥ ೨೫ ॥

ಒಂದರಿಂದಾದಿಯೋ । ಆದಿಯಲಿ ಭೇದವೋ
ಆದಿ ಅಂತಿಲ್ದ ವಿಶ್ವದಾ ಆದ್ಯಂತ
ವಾದವೇ ವ್ಯರ್ಥ ಮರ್ಮಜ್ಞ ॥ ೧೬ ॥

ಆದಿಯಲಿ ಬೀಜವೋ । ಪಾದಪವೆ ಆದ್ಯವೋ ?
ಆದಿಯಲಿ ಆವುದಿದ್ದೇನು ? ನಾನಾತ್ವ
ಒಂದು ಬಿಟ್ಟಿಲ್ಲ ಮರ್ಮಜ್ಞ ॥ ೧೭ ॥

ಮೋಕ್ಷದಾ ಯಾಚಕನೆ । ಮೋಕ್ಷ ಯಾಚಕಗುಂಟೆ?
ಭಿಕ್ಷೆಯಾ ಯಾಚಕನು ದಾಸ್ಯದಧಿಕಾರಿ
ಮೋಕ್ಷದಾ ಅಲ್ಲ ಮರ್ಮಜ್ಞ! ॥ ೧೮ ॥

ಹಗ್ಗ ಹಾವೆನ್ನುವನು । ಸಗ್ಗ ಮುಗ್ಗೆನ್ನನೇ ?
ಸಗ್ಗ ಹೊರಗಿಲ್ಲ ದೂರದಲಿ, ಹೃದಯದಾ
ಹಿಗ್ಗಿನಲಿ ಸಗ್ಗ ಮರ್ಮಜ್ಞ! ॥ ೧೯ ॥

ಕಾಣುದನ ಕಡೆಗಂಡು । ಕಾಣದನ ಕಾಣುವರೆ ?
ಪ್ರಾಣಿಗಳ ಸುತ್ತ ಪ್ರೀತಿಸದೆ ಅರಿವನೇ
ಪ್ರಾಣದಾ ಮರ್ಮ ಮರ್ಮಜ್ಞ ? ॥ ೨೦ ॥

ಇಲ್ಲಿದನ ಮಾಡದವ । ನಲ್ಲಿದನ ಮಾಡುವನೆ ?
ಇಲ್ಲಿನರನೆಲ್ಲ ಒಲ್ಲೆನುವನಾಗುವನೆ
ಅಲ್ಲಿನರ ನಲ್ಲ ಮರ್ಮಜ್ಞ ? ॥ ೨೧ ॥

ಸ್ಪಷ್ಟವನು ದಾರ್ಶನಿಕ । ಕ್ಲಿಷ್ಟ ಬಗೆಯುವನಲ್ಲ !
ಕ್ಲಿಷ್ಟದಾ ಬೇಟೆಯಲಿ ದಿಕ್ಕು ತಪ್ಪುತಾ
ಇಷ್ಟಾರ್ಥಭ್ರಷ್ಟ ಮರ್ಮಜ್ಞ ॥ ೨೨ ॥

ಸಂದೇಹ ಜಿಜ್ಞಾಸೆ । ವಾದಭೂಮಿಯ ಪ್ರಾಣ
ಸಂದೇಹವಿಲ್ದ ವಾದಗಳು ನೀರಿಲ್ದ
ಮಿಂದವರ ಭ್ರಾಂತಿ ಮರ್ಮಜ್ಞ ! ॥ ೨೩ ॥

ಶಂಕೆಯೋ ಇಲ್ಲದವ । ಶಂಖಸನು ನಿರ್ಬುದ್ಧ !
ಶಂಖದಾ ನಾದ ಊದುಗನ ಅನುನಾದ
ಶಂಖ ನಿರ್ನಾದ ಮರ್ಮಜ್ಞ ! ॥ ೨೪ ॥

ಹಿಂದಿನರ ಅನುನಾದಿ । ಇಂದಿಗನು ಆಗುವನೆ?
ಅಂದಿನರ ರೂಢ ವಾದಗಳ ಬಂಧನವು
ಇಂದಿನರಿಗಿಲ್ಲ ಮರ್ಮಜ್ಞ ॥ ೩೫ ॥

ಕಷ್ಟಸಾಧ್ಯವಿದಣ್ಣ । ದೃಷ್ಟಿಗೋಚರ ಜ್ಞಾನ
ದೃಷ್ಟವಿಜ್ಞಾನ ಕೋವಿದಗೆ ಸಲ್ಲುವುದು
ಕ್ಲಿಷ್ಟ ಅದೃಷ್ಟ ಮರ್ಮಜ್ಞ ॥ ೩೬ ॥

ಸತ್ಯದಾ ಬೇಟೆಗನೆ । ಸತ್ಯವಂತರ ಕಾಣು
ಸತ್ಯದಾ ನಿಷ್ಠೆಯಲಿ ಉಂಟು ದರ್ಶನವು
ಸತ್ಯದಾ ನಿತ್ಯ ಮರ್ಮಜ್ಞ ॥ ೩೭ ॥

ಸತ್ಯದಲಿ ಸೌಂದರ್ಯ । ಸತ್ಯದಲಿ ಕಲ್ಯಾಣ
ಸತ್ಯ ಪ್ರಜ್ಞಾನದಮೃತವ ಕಂಡವಗೆ
ಮೃತ್ಯುಭಯವಿಲ್ಲ ಮರ್ಮಜ್ಞ ॥ ೩೮ ॥

ಸರ್ವರಾ ಸುಖದಲ್ಲಿ । ಓರ್ವನಿಗು ಸುಖವುಂಟು
ಸರ್ವರೂ ಕಷ್ಟಕೀಡಾಗೆ ತಪ್ಪುವುದೆ
ಓರ್ವನಾ ನಷ್ಟ ಮರ್ಮಜ್ಞ ? ॥ ೩೯ ॥

ಇಂತು ಇದು ವೇದಾಂತ । ಅಂತೆಕಂತೆಗಳಂತ
ಭ್ರಾಂತಿಯಾ ಕ್ರಾಂತಿ, ಶ್ರಾಂತಿಯಾ ವಿಶ್ರಾಂತಿ
ಸಂತಸದ ಶಾಂತಿ ಮರ್ಮಜ್ಞ ॥ ೪೦ ॥

# ೧೨. ವಿಶ್ವಬಾಂಧವ್ಯ

ಇಂದಿನರ ನಾಗರಿಕತೆಗೆ ಬರಿ ರಾಷ್ಟ್ರೀಯ ಹಿನ್ನೆಲೆಯಿರದೆ ವಿಶ್ವಬಾಂಧವ್ಯದ ಭವ್ಯ ಹಿನ್ನೆಲೆಯೂ ಇದೆಂಬುದನ್ನು ಈ ಮೊದಲೆ ಹೇಳಲಾಗಿದೆ. ಪನ್ನ್ಯ ಮಾನವ ವಾನರಾದಿಗಳಿಂದ ಬಹಳ ಭಿನ್ನವಾಗಿರಲಿಲ್ಲ. ಆದರೆ ಮಾನವೀ ದೇಹರಚನೆಯೆ ಅವನ ವಿಕಾಸಕ್ಕೆ ಅನುಕೂಲವಾದ್ದರಿಂದ ಮತ್ತು ಅವನ ಮನೋಮಯ ಅಂಗವೂ ಮೇಲ್ಮಟ್ಟದಾದ್ದರಿಂದ ಅವನು ಸಭ್ಯತೆಯತ್ತ ಸಾಗುತ್ತ ಬಂದ. ಆದರೆ ವಾನರಾದಿಗಳು ಮಾತ್ರ ಅರವತ್ತುಸಾವಿರ ವರ್ಷಗಳ ಪೂರ್ವದಲ್ಲಿ ಇದ್ದಂತೆಯೆ ಇರುವವು. ಮಾನವೀ ಪ್ರಗತಿಯ ಶ್ರೇಯಸ್ಸಿನ ಬಹುಭಾಗ ಅವನ ಸರಳವಾದ ಬೆನ್ನೆಲವಿಗೂ, ಮೆದುಳಿಗೂ, ಕೈಬೆರಳುಗಳನ್ನು ಸುಗಮವಾಗಿ ಎದುರಿಸಬಲ್ಲ ಅವನ ಹೆಬ್ಬೊಟ್ಟಿಗೂ ಇದೆ. ನಮ್ಮ ಕೈಯ ಹೆಬ್ಬೊಟ್ಟು ಈಗ ಇರುವಂತೆ ಇರದಿದ್ದರೆ ನಮ್ಮಿಂದ ಯಾವ ಕುಶಲ ಕೆಲಸವೂ ಆಗುತ್ತಿರಲಿಲ್ಲ. ಇದರ ಪ್ರಯೋಗ ಬಯಸುವವರು ತಮ್ಮ ಹೆಬ್ಬೆರಳು ಅಂಗೈಗೆ ಗಟ್ಟಿಯಾಗಿ ಕಟ್ಟಿಕೊಂಡು ನೋಡಬೇಕು. ಬರೆಯುವ, ಹೊಲಿಯುವ, ಯಾವದೇ ಆಯುಧ ಹಿಡಿಯುವ ಕೆಲಸವಾಗದು. ದಿನಾಲು ನಾನು ಬರೆಯುವ ಮುನ್ನ ನನ್ನ ಹೆಬ್ಬೊಟ್ಟಿನ ಉಪಕಾರ ಸ್ಮರಿಸದಿಲ್ಲ. ನಮ್ಮ ತಲೆಯ ಹಿಂಭಾಗದ ಕೆಳಬದಿಯಲ್ಲಿ ಸೆರಿಬೆಲಮ್ ಎಂಬ ಅವಯವವಿದೆ. ಅದು ಸರಿಯಾಗಿ ಸಹಕರಿಸದೆ ಹೋದರೆ ನಡೆದಾಡುವಾಗ ನಮ್ಮ ತೂಕವೆ ತಪ್ಪಿ ನಾವು ಅತ್ತಿತ್ತ ಹೊಯ್ದಾಡುತ್ತ ಬೀಳುವೆವು.

ಇದನ್ನು ಹೇಳುವ ಕಾರಣವಿಷ್ಟೆ. ನಮಗೆ ಅತ್ಯಂತ ಪರಿಚಿತ ವಸ್ತು ನಮ್ಮ ದೇಹ. ಇದರ ಬಗೆಗೆ ನಮ್ಮ ಅಜ್ಞಾನ ಅಗಾಧವಾಗಿದೆ! ನಮ್ಮದೀ ಭೂಲೋಕ ಕಿತ್ತಳೆ ಹಣ್ಣಿನಂದದಿ ಗೋಲವಿದೆಂಬ ಮಾತು 'ಮೂರು ಕಾಲಗಳನ್ನು ಬಲ್ಲ' ಹಿಂದಿನ ಜಾಣರಿಗೆ ಗೊತ್ತಿದ್ದಿಲ್ಲ! ಭಾರತದಲ್ಲಿ ಬೇಸಿಗೆ ಇರುವಾಗ ಆಸ್ಟ್ರೇಲಿಯಾದಲ್ಲಿ ಚಳಿಗಾಲವೇಕೆ? ಇಂಗ್ಲಂಡಿನಲ್ಲಿ ಮಳೆಗಾಲವಿಲ್ಲ, ಪ್ರತಿತಿಂಗಳ ಮಳೆ. ಭಾರತ ಚೀನ ಮೊದಲಾದವುಗಳಲ್ಲಿ ನಿರ್ದಿಷ್ಟ ಕಾಲದಲ್ಲಿ ಮಳೆ. ಇವೇ ಮೊದಲಾದ ಸಂಗತಿಗಳ ಜ್ಞಾನವು ನಮ್ಮಗಳಿಗೆ ಇತ್ತೀಚೆಗೆ ಆಗಿದೆ. ಈ ಲೋಕವೆ ನಮಗೆ ಸಾಕಷ್ಟು ಪರಿಚಿತವಿಲ್ಲ. ಸ್ವರ್ಗಾದಿ ಪರಲೋಕಗಳ ಬಗೆಗೆ ಹರಟೆ ಕೊಚ್ಚುವಲ್ಲಿ ಯಾವ ಪ್ರಯೋಜನ?

ಮಾನವೀ ಸಮಾಜವು ವಿಕಾಸಗೊಂಡ ಕ್ರಮದ ಇತಿಹಾಸ ಬಹಳ ರಮ್ಯ, ವಿಚಾರ ಪ್ರಚೋದಕವಿದೆ. ಅದರ ಪರಿಚಯವಿಲ್ಲದವರಿಗೆ ಮಾನವನು ತುಸು ಹೆಚ್ಚು ಕಡಿಮೆ ಈಗಿನಂತೆಯೆ ಎಂದಿಗೂ ಇದ್ದವನೆಂದು ಎನಿಸುವುದು. ಇಲ್ಲವಾದರೆ ವಿಶಿಷ್ಟಕುಲಗಳು ಯಾವುದೋ ಲೋಕದಿಂದ ದೊಪ್ಪನೆ ಈ ಲೋಕದ ಮೇಲೆ ಬಿದ್ದವೆಂದೂ ಎನಿಸಬಹುದು!

ಒಂದು ವಿಶಿಷ್ಟ ವಿಕಾಸಮಟ್ಟದಲ್ಲಿ ಪ್ರಭಾವಿಯಾದ ಧಾರ್ಮಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಸಂಸ್ಥೆಗಳು ಮತ್ತೊಂದು ಕಾಲಖಂಡದಲ್ಲಿ ಕಳೆಗುಂದಿ, ಅಪ್ರಭಾವಿಯಾಗಿ ನಾಮಶೇಷವಾದುದನ್ನು ನಾವು ಇತಿಹಾಸದಲ್ಲಿ ಕಾಣಬಹುದು.

ತಂಡ ತಂಡವಾಗಿದ್ದ ಮಾನವರ ದೇವ, ಧರ್ಮ, ನರಬಲಿ, ಕಠೋರ ನ್ಯಾಯದಾನ ಇವೆಲ್ಲ ಇಂದಿನವರಿಗೆ ಆದರ್ಶವಾಗುವವೆ? ಅವರ ದೇವರು ತಂಡಿನೊಡೆಯನಂತೆಯೆ ಕಠೋರ, ನರಮಾಂಸಪ್ರಿಯನಾಗಿದ್ದ. ತಂಡಿನೆಲ್ಲ ಸ್ತ್ರೀಯರು ಒಡೆಯನ ಸೊತ್ತು! ಇವನ ಹೇಳಿಕೆ ಸತ್ಯ ಇಲ್ಲವೆ ಸುಳ್ಳು ಎಂಬುದರ ನಿರ್ಣಯ ಅಗ್ನಿಯಿಂದಾಗುತ್ತಿತ್ತಂತೆ. ಸತ್ಯವಂತನ ಕೈ ಸುಡುತ್ತಿದ್ದಿಲ್ಲವಂತೆ. ಸುಳ್ಳನ ಕೈ ಸುಟ್ಟುಹೋಗುತ್ತಿತ್ತಂತೆ!

ಪ್ರಾಚೀನ ಸಮಾಜದಲ್ಲಿ ಯುದ್ಧದಲ್ಲಿ ಸೋತವರು ಗೆದ್ದವರ ಸೊತ್ತು. ಪ್ರಾಯಃ ಅವರಿಗೆ ದಾಸ್ಯದೀಕ್ಷೆಯೆ. ಪಶುಗಳಂತೆ ಈ ದಾಸರ ಮಾರಾಟವೂ ಆಗುತ್ತಿತ್ತು. ಆ ದಾಸ್ಯಜೀವನ ಆದರ್ಶವೆಂದು ಇಂದಿನರು ಎತ್ತಬಹುದೆ?

ಕ್ರಮೇಣ ನಿರಂಕುಶ ರಾಜಪ್ರಭುತ್ವ ಪ್ರಭಾವಿಯಾಗಿ ದಾಸ್ಯವು ಅಶಿಷ್ಟವಾಯಿತು. ಎಲ್ಲದೂ ರಾಜನ ಸೊತ್ತು. ಅವನ ಅಧಿಕಾರ ದೇವದತ್ತ. ಅವನು ಪ್ರತ್ಯಕ್ಷ, ಕಣ್ಣಿಗೆ ಕಾಣುವ ದೇವ. ಕಣ್ಣಿಗೆ ಕಾಣದ ದೇವ, ಜಗದೀಶ, ನರೇಶನ ಸುಧಾರಿಸಿದ ಮಾದರಿ. ರಾಜನ ಕೃಪೆಗೆ ಪಾತ್ರರಾದವರು ಸಾಮಂತರು, ಸರದಾರರು, ಜಹಗೀರದಾರರು. ಉಳಿದವರು ಇವರ ಆಶ್ರಿತರು ಮತ್ತು ಆಶ್ರಿತರ ಆಶ್ರಿತರು. ಸ್ವತಂತ್ರನಾಗರಿಕರ ಸುದ್ದಿಯೆ ಇರಲಿಲ್ಲ. ಆಶ್ರಿತರಲ್ಲದವರು ಅನಾಥರು. ದಾಸ್ಯ ಕಡಿಮೆಯಾಗಿ ಅನಾಥರ ಮತ್ತು ಭಿಕ್ಷುಕರ ವರ್ಗಗಳಾದವು. ಅಂತೂ ಇಂದಿನಂತೆ ಈಗ ನಾಗರೀಕ ಸ್ವಾತಂತ್ರ್ಯವು ಜನಸಾಮಾನ್ಯರಿಗಂತೂ ಇರಲೇ ಇಲ್ಲ. ದೊಡ್ಡ ಪ್ರತಿಷ್ಠಿತರಿಗೂ ಇದ್ದಿಲ್ಲ. ಯಾರ ಸಿರಿಯಾಗಲಿ, ಸ್ತ್ರೀಯರಾಗಲಿ, ಜೀವವಾಗಲಿ ಸುರಕ್ಷಿತವಿದ್ದಿಲ್ಲ. ಪರಸ್ತ್ರೀಹರಣವು ಶಿಷ್ಟಸಂಮತವಾಗಿದ್ದಿತು. ಶಸ್ತ್ರಧಾರಿಗಳ ಕಾಲವದು. ಅಂತೆಯೆ

'ರೂಪವತಿ ಹೆಂಡತಿ ಗಂಡನ ಶತ್ರು' ಎಂಬ ಲೋಕೋಕ್ತಿ ರೂಢವಾಗಿದೆ. ಈ ದುಃಸ್ಥಿತಿಯನ್ನು ಗಮನಿಸಿ ಮನ್ವಾದಿ ಸ್ಮೃತಿಕಾರರು ಮಹಿಳೆ ಸ್ವಾತಂತ್ರ್ಯಕ್ಕೆ ಅರ್ಹಳಲ್ಲೆಂದು ಹೇಳಿದ್ದುಂಟು. ಮಹಿಳೆಯ ಜೀವನವು ಈ ಕಾಲಖಂಡದಲ್ಲಿ ತಾಳಲಾರದಷ್ಟು ಕಷ್ಟಮಯವಾಗಿದ್ದಿತು. ಅರಸರಿಗೆ ಸಾವಿರಾರು ಹೆಂಡಿರು. ಅವರ ಸಾಮಂತರಿಗೆ ನೂರಾರು, ಸಾಮಾನ್ಯ ಆಶ್ರಿತನಿಗೂ ನಾಲ್ಕೈದು. ಈ ಸಮಾಜದಲ್ಲಿ ನಮ್ಮ ಅಂದಿನ ಭಗಿನಿಯರು ಸಹಿಸಿದ ಕಷ್ಟನಷ್ಟಗಳನ್ನು ಬಣ್ಣಿಸುವದಕ್ಕಿಂತ ಓದುಗರು ಊಹಿಸುವದೇ ಲೇಸೆಂದು ನನಗೆ ಅನಿಸುತ್ತದೆ. ಅಂದಿನ ಗಂಡಸರು ಸ್ತ್ರೀಯರು ಮಾನವರೇ ಅಲ್ಲ ಎಂದು ತಿಳಿದಂತೆ ತೋರುತ್ತದೆ. ಒಬ್ಬನು ಸಾವಿರಾರು ಹೆಂಡಂದಿರನ್ನು ಮದುವೆಯಾದ ಮೇಲೆ ಈ ಮಾನವ ದೇಹೀ ರಾಕ್ಷಸನ ಪತ್ನಿಯಾಗುವ ಪ್ರಸಂಗಕ್ಕೆ ತುತ್ತಾದ ಆ ಬಡ ಮಹಿಳೆಯ ಬಾಳು ತುಂಬಾ ಹಾಳು ಆಗುತ್ತಿತ್ತು ಎಂಬುದು ಸ್ಪಷ್ಟವಲ್ಲವೆ?

ಜನ ಸಾಮಾನ್ಯರಿಗೆ ಮದುವೆಯಾಗಲಿಕ್ಕೆ ಹೆಂಗಳೆಯರು ಆ ಕಾಲದಲ್ಲಿ ದುರ್ಲಭವೆಂಬುದು ಒಡೆದು ಕಾಣುವ ಮಾತು. ಲಭ್ಯವಾದದ್ದೇ ಆದರೆ ಅವರೆಲ್ಲ ಕುರೂಪರೇ. ಕುಲ ವಂಶಗಳ ಅಭಿಮಾನ ಆಗ ಮಿತಿಮೀರಿದ್ದಿತು. ಈ ಅಸಹ್ಯ ಅಭಿಮಾನಕ್ಕನುಗುಣವಾಗಿ ಅಂದಿನ ಸಮಾಜರಚನೆಯಾಗಿದ್ದಿತು. ಶಸ್ತ್ರಪಾಣಿಗಳು ಮತ್ತು ಧರ್ಮಾಧಿಕಾರಿಗಳು ಮೇಲಣ ವರ್ಣಗಳಲ್ಲಿ, ರಾಜ್ಯ ಸೂತ್ರಗಳೆಲ್ಲ ಯೋಧರ ಕೈಯಲ್ಲಿ, ಧರ್ಮಸೂತ್ರಗಳೆಲ್ಲ ಅರ್ಚಕ ವರ್ಗದವರ ಕೈಯಲ್ಲಿ. ಧರ್ಮಕ್ಷೇತ್ರದಲ್ಲಿ ಕರ್ಮಠತನದ ಹಾವಳಿ. ಅರಸರಷ್ಟೇ ದುರಾರಾಧ್ಯದೇವತೆಗಳನ್ನು ಸಂತೈಸುವ ಯಜ್ಞಯಾಗಾದಿ ಕರ್ಮಗಳಲ್ಲಿ ಎಲ್ಲರೂ ಶ್ರದ್ಧೆಯುಳ್ಳವರೇ! ಮಕ್ಕಳಿಲ್ಲದ ದಶರಥ ಪುತ್ರಕಾಮೇಷ್ಠಿ ಯಜ್ಞಮಾಡಿದ್ದು ಸರ್ವಶ್ರುತವೇ ಇದೆ. ಧರ್ಮದ ನೆಪದಿಂದ ಧರ್ಮದ ಹುಡುಗಾಟವೇ ಸಾಗುತ್ತಿತ್ತು. ರಾಜರು ಪ್ರತ್ಯಕ್ಷ ದೇವತೆಗಳಾದರೆ ಅವರ ಧರ್ಮಗುರುಗಳು ಮತ್ತು ಅವರ ಕುಲದವರೆಲ್ಲ ಭೂದೇವತೆಗಳು. ಅರಸರನ್ನು ಧರ್ಮಾಧಿಕಾರಿಗಳು ಪ್ರತ್ಯಕ್ಷ ದೇವತೆ ಎಂದು ಗೌರವಿಸಿದರೆ, ಅರ್ಚಕರೆಲ್ಲ ಭೂದೇವತೆಗಳೆಂದು ರಾಜರು ಇವರನ್ನು ಗೌರವಿಸುವರು. **अहो रूपं अहो ध्वनि:** ನ್ಯಾಯದಂತೆ ಒಬ್ಬರನ್ನೊಬ್ಬರು ಹೊಗಳುವುದು ಸಹಜವೇ! ಮನುಸ್ಮೃತಿ ಮುಂತಾದ ಅಂದಿನ ಕಾಲದ ಧರ್ಮಶಾಸ್ತ್ರಗಳನ್ನು ಓದಿದರೆ ಮೇಲಣ ವರ್ಣಗಳನ್ನು ಬಿಟ್ಟು ಉಳಿದವರ ಸ್ಥಾನಮಾನ ಅದೆಷ್ಟು ಅಸಹ್ಯವಾಗಿದ್ದಿತೆಂಬುದು ಸ್ಪಷ್ಟವಾಗುವದು. ಬ್ರಿಟಿಶ್ ಸಾಮ್ರಾಜ್ಯವಾದಿಗಳು ತಮಗಧೀನವಾದ

ಪ್ರದೇಶಗಳಲ್ಲಿ ತೋರಿಸಿದ ಪಕ್ಷಪಾತ, ತಾರತಮ್ಯ ಈ ಪ್ರಾಚೀನ ಧರ್ಮ ಶಾಸ್ತ್ರಗಳಲ್ಲಿಯೂ ಕಂಡುಬರುವದು. ಅಂತೂ ಸ್ತ್ರೀ ಶೂದ್ರಾದಿಗಳಿಗೆ ಮತ್ತು ಜನಸಾಮಾನ್ಯರಿಗೆ ತಥಾಕಲ್ಪಿತ ಅಂದಿನ ಆದರ್ಶ ರಾಮರಾಜ್ಯಗಳು ಅಸಹ್ಯ ತಮೋಯುಗವೆಂದೇ ಹೇಳಬಹುದು. ಈ ದುಃಸ್ಥಿತಿ ಭಾರತದಲ್ಲಿಯಷ್ಟೇ ಇದ್ದಿತೆಂದು ತಿಳಿಯಬಾರದು. ಪ್ರಪಂಚದ ಎಲ್ಲೆಡೆಯಲ್ಲಿಯೂ ನಿರಂಕುಶ ಅರಸೊತ್ತಿಗೆಯಲ್ಲಿ ತುಸು ಹೆಚ್ಚುಕಡಿಮೆ ಇದೇ ತೆರದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ದುರವಸ್ಥೆ ಕಂಡು ಬರುವದು. ವಾಸ್ತವತೆ ಹೀಗಿದ್ದು ವಿಜಿಗೀಷು ಆರ್ಯರು ಭಾರತದಲ್ಲಿ ಪ್ರಚಾರಿಸಿದ ಚಾತುರ್ ವರ್ಣ್ಯವು ಒಂದು ಮಾದರಿಯ, ಎಲ್ಲ ಕಾಲಕ್ಕೂ ಸರಿಹೋಗುವ ಆದರ್ಶ ಸಮಾಜ ರಚನೆಯೆಂದು ಇತಿಹಾಸದ ಸಂಪೂರ್ಣ ಅಜ್ಞಾನದಿಂದ ವಿಭೂಷಿತ ರಾದ ಗತಪೂಜಕರು ಬಾರಿ ಬಾರಿ ಪ್ರತಿಪಾದಿಸುವರು! ಅವರಷ್ಟು ಜಾಣರು ಅವರೇ!

ರಾಜಪ್ರಭುತ್ವದೊಳಗಿನ ಸಾಮಾಜಿಕ ಚಿತ್ರ ಮೃಚ್ಛಕಟಿಕ ನಾಟಕದಲ್ಲಿ ಮಾರ್ಮಿಕ ರೀತಿಯಲ್ಲಿ ಕಂಡು ಬರುವದು. ಶಕಾರನ ಮಾದರಿಯ ರಾಜ ಸಂಬಂಧಿಕರು ಚಾರುದತ್ತನ ಮಾದರಿಯ ಸಜ್ಜನರನ್ನು ಮತ್ತು ವಸಂತ ಸೇನೆಯ ಮಾದರಿಯ ಸುಶೀಲ ನಾರೀಮಣಿಗಳನ್ನು ಹೇಗೆ ನಿರ್ಭಯ ರೀತಿಯಿಂದ ಪೀಡಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅದೇ ರೀತಿ ಅಜ್ಞಾತವಾಸದಲ್ಲಿ ಪಾಂಡವರು ವಿರಾಟನ ಅರಮನೆಯಲ್ಲಿ ಆಶ್ರಿತರಾಗಿ ಇರುವಾಗ ಲಾವಣ್ಯವತಿಯಾದ ದ್ರೌಪತಿಗೆ ಅರಸನ ಬೀಗನಾದ ಕೀಚಕನು ಹೇಗೆ ಪರಿಪರಿಯಿಂದ ಪೀಡಿಸಿ ಕೊನೆಗೆ ಭೀಮಸೇನನಿಂದ ಹತನಾದನೆಂಬುದು ಸರ್ವಶ್ರುತವೇ ಇದೆ. ಈ ತೆರದ ಸಾವಿರಾರು ಉದಾಹರಣೆಗಳನ್ನು ಕೊಡ ಬಹುದು. ಅಂತೂ ಸಾಮಾನ್ಯಜನರಿಗೆ ಅಂದಿನ ಸಮಾಜದಲ್ಲಿ ಪ್ರತಿಷ್ಠಿತ ರಾಗಿ, ಸ್ವತಂತ್ರರಾಗಿ, ಸುರಕ್ಷಿತರಾಗಿ ಬಾಳಲು ಶಕ್ಯವೇ ಇರಲಿಲ್ಲ. ಅರಸರ ಅಥವಾ ಅವರ ಬಾಲಬಡಕರ ಇಲ್ಲವೇ ಅಧಿಕಾರಿಗಳ ಅವಕೃಪೆಗೆ ತುತ್ತಾದವರಿಗೆ ಉಳಿಗಾಲವೇ ಇರಲಿಲ್ಲ.

ಸಮಾಜವೆಂದರೆ ಸಮಾಜದ ಎಲ್ಲ ಘಟಕಗಳಲ್ಲಿ ಸಮತ್ವ ಮತ್ತು ಮಮತ್ವ ಭಾವನೆಗಳಿರಬೇಕು. ಆದರೆ ಅನಾರ್ಯರನ್ನೆಲ್ಲ ಗೆದ್ದು ಭಾರತದ ಸಾರ್ವಭೌಮರಾದ ಅಂದಿನ ವಿಜಿಗೀಷು ಸಾಮ್ರಾಜ್ಯವಾದಿ ಆರ್ಯರು ತಮ್ಮ ವರ್ಚಸ್ಸವು ಅಬಾಧಿತವಾಗಿ ಉಳಿಯುವಂತೆ ನಾಲ್ಕು ವರ್ಣಗಳನ್ನೊಳಕೊಂಡ

ಸಮಾಜರಚನೆಯನ್ನು ಪ್ರಚಾರದಲ್ಲಿ ತಂದರು. ಗೆದ್ದವರು ಮತ್ತು ಸೋತವರು ಇವರಲ್ಲಿ ಮೇಗು ಕೀಳು ಎಂಬ ಭಾವನೆ ಇಟ್ಟುಕೊಂಡು ಈ ಸಮಾಜ ರಚನೆಯಾಗಿದೆ. ಮೇಲಣ ಎರಡು ವರ್ಣಗಳಿಗೆ ನಾಗರೀ ಹಕ್ಕುಗಳು, ಉಳಿದವರಿಗೆ ನಾಗರಿಕರ ಸ್ವಾತಂತ್ರ್ಯ, ಅಧಿಕಾರ, ಉದ್ಯೋಗ ಮಾಡುವ ಸ್ವಯಂ ನಿರ್ಣಯ ಮುಂತಾದ ಯಾವ ಹಕ್ಕುಗಳೂ ಕಂಡುಬರುವುದಿಲ್ಲ. ಇಂಥ ಸಮಾಜದಲ್ಲಿ ಒಬ್ಬರೊಬ್ಬರ ಬಗೆಗೆ ಪ್ರೀತಿಯಾಗಲಿ, ಆದರವಾಗಲಿ, ಆತ್ಮೀಯತೆ ಆಗಲಿ ನೆಲಸುವುದು ಶಕ್ಯವೇ ಇಲ್ಲ. ಮೇಲಣ ಎರಡು ವರ್ಣಗಳಲ್ಲಿಯೂ ಕೂಡ ಸ್ನೇಹಭಾವ ಉಳಿಯಲಿಲ್ಲ. ವಿಶ್ವಾಮಿತ್ರನು ತನ್ನ ತೇಜಸ್ಸಿನಿಂದ, ತಪಸ್ಸಿನಿಂದ ಬ್ರಹ್ಮರ್ಷಿಯಾಗಲಿಕ್ಕೆ ಹಂಬಲಿಸಿದನು. ಅದಕ್ಕೆ ವಸಿಷ್ಠ ಮುನಿಗಳು ಅಡ್ಡಬಂದರು. ನ್ಯಾಯವಾಗಿ ವಸಿಷ್ಠರಂಥ ವಿದ್ವಾನ್ ಬ್ರಾಹ್ಮಣರು ವಿಶ್ವಾಮಿತ್ರನ ಯೋಗ್ಯ ಮಹತ್ವಾಕಾಂಕ್ಷೆಯನ್ನು ಸ್ವಾಗತಿಸಿ, ಬ್ರಹ್ಮಋಷಿಯಾಗಲಿಕ್ಕೆ ಅವನಿಗೆ ತಕ್ಕ ಮಾರ್ಗದರ್ಶನವನ್ನು ಸಹಾನುಭೂತಿಯಿಂದ ಮಾಡಬೇಕಾಗಿತ್ತು. ಆದರೆ ಆ ತೆರದ ಔದಾರ್ಯ ವಸಿಷ್ಠರಲ್ಲಿ ಕಂಡುಬರಲಿಲ್ಲ.

ಮೇಲಣ ಎರಡು ವರ್ಣಗಳಲ್ಲಿ ಆರಂಭದಲ್ಲಿ ಕೇವಲ ಆರ್ಯರೇ ಇದ್ದರೂ, ಅವರಲ್ಲಿ ಸಹ ವರ್ಣಮತ್ಸರ ಉಂಟಾಯಿತೆಂದ ಮೇಲೆ ಉಳಿದ ವರ್ಣಗಳಲ್ಲಿ ಒಬ್ಬರೊಬ್ಬರ ಬಗೆಗೆ ದ್ವೇಷಾಸೂಯೆ ಪ್ರಭಾವಿಯಾದುದು ಕ್ರಮಪ್ರಾಪ್ತ ಪರಿಣಾಮವೆ ಸರಿ. ಅನಾರ್ಯರು ಪರಾಭೂತರೆಂಬುದಾಗಿ ಅವರನ್ನೆಲ್ಲಾ ಪ್ರಾಯಃ ಶೂದ್ರರೆಂದೇ ಗಣಿಸಲಾಯಿತು. ಈ ನಾಲ್ಕನೆಯ ವರ್ಣದಲ್ಲಿದ್ದವರಿಗೆ ಯಾವ ನಾಗರೀ ಹಕ್ಕುಗಳೇ ಇರಲಿಲ್ಲ. ನಾವೆಲ್ಲ ಒಂದೇ ಸಮಾಜದ ಘಟಕಗಳೆಂಬ ಭಾವನೆ ಸಾಮ್ರಾಜ್ಯವಾದೀ ಆರ್ಯರು ನಿರ್ಮಿಸಿದ ಸಮಾಜದಲ್ಲಿ ಎಂದೂ ಹುಟ್ಟಲಿಲ್ಲ. ಸಮಾಜವು ಸಮಾಜವಾಗಿ ತಾಳಲು ಅಕ್ಷಮವಾಗುವಷ್ಟು ಅಸಹ್ಯ ವೈಷಮ್ಯದೂಷಿತ ಸಮಾಜರಚನೆ ಪ್ರಪಂಚದ ಇತಿಹಾಸದಲ್ಲಿ ಆರ್ಯನಿರ್ಮಿತ ಚಾತುರ್ವರ್ಣ್ಯವನ್ನು ಬಿಟ್ಟು ಎಲ್ಲಿಯೂ ಕಾಣದು. ಸಮತ್ವ, ಬಂಧುತ್ವ ಮತ್ತು ಮಾನವೀ ಸ್ವಾತಂತ್ರ್ಯ ಇವುಗಳ ಸಂಪೂರ್ಣ ನಾಶಮಾಡುವ ಸಮಾಜರಚನೆಯೆಂದರೆ ಚಾತುರ್ವರ್ಣ್ಯವೆ. ಮಾನವರ ಅಮಾನವೀಕರಣಮಾಡುವ ದ್ವಾಪರಯುಗದ ಈ ಸಾಮ್ರಾಜ್ಯವಾದಿ ಆರ್ಯರ ಸಮಾಜ ರಚನೆ ವಿಶ್ವಬಾಂಧವ್ಯವನ್ನು ಮೆಚ್ಚುವ ಇಂದಿನ ಜನತಾ ರಾಜ್ಯವಾದೀ ಪ್ರಬುದ್ಧ ಸಮಾಜಕ್ಕೆ ಸರಿಹೋಗುವುದೆಂದು ಪ್ರತಿಪಾದಿಸುವವರ ಬುದ್ಧಿಗೆ ಬೆಲೆಯಿಲ್ಲ!

ಮುಂದೆ ಉದ್ದಿಮೆ, ಕೈಗಾರಿಕೆ ಮತ್ತು ವಾಣಿಜ್ಯ ಇವುಗಳ ಬೆಳವಣಿಗೆ ಯಾದಂತೆ ಪಟ್ಟಣಗಳು ಬೆಳೆದವು. ಅಂತರ್‌ರಾಷ್ಟ್ರೀಯ ವಾಣಿಜ್ಯ ವ್ಯವಹಾರವೂ ಬೆಳೆಯಿತು. ಅದಕ್ಕನುಗುಣವಾಗಿ ವಿಜ್ಞಾನದಲ್ಲಿಯೂ ಪ್ರಗತಿಯುಂಟಾಗಿ ಮಾನವನ ಎಷ್ಟೋ ತಪ್ಪು ತಿಳುವಳಿಕೆಗಳಿಗೆ ದೀರ್ಘಕಾಲದ ಗೌರವವು ಉಳಿಯದಾಯಿತು. ಹಿರಿಯರಿಂದ ಸಾಗಿ ಬಂದ ಜ್ಞಾನದಲ್ಲಿ ಅಜ್ಞಾನದ ಅಂಶವೂ ಕಡಿಮೆಯಿಲ್ಲ ಎಂಬ ಮಾತು ಸ್ಪಷ್ಟವಾಗಲಾರಂಭಿಸಿತು. ಗೆಲಿಲಿಯೋ ಮೊದಲಾದವರ ಖಗೋಲ ಶಾಸ್ತ್ರದೊಳಗಿನ ಹೊಸ ಸಿದ್ಧಾಂತಗಳಿಂದ ಯುರೋಪದೊಳಗಿನ ಕ್ರಿಸ್ತೀ ಸನಾತನಿಗಳಲ್ಲಿ ಯಾವ ತೆರದ ಅಸಹಿಷ್ಣುತೆಯ ಪ್ರತಿಕ್ರಿಯೆ ತಲೆಯೆತ್ತಿತೆಂಬುದನ್ನು ಹೆಚ್ಚಾಗಿ ಬಣ್ಣಿಸುವ ಕಾರಣವಿಲ್ಲ. ಹೊಸ ಉಪಕರಣಗಳಿಂದ, ಸಶಾಸ್ತ್ರ ಸಂಶೋಧನ ಪದ್ಧತಿಯಿಂದ ಆಕಾಶಸ್ಥ ಉಳಿದ ಅನೇಕ ಗೋಲಗಳಂತೆ ನಮ್ಮ ಲೋಕವೂ ಎಂದರೆ ಪೃಥ್ವಿಯೂ ಗೋಲವಿದೆ ಎಂದು ಪ್ರತ್ಯಕ್ಷ ಪ್ರಮಾಣಗಳಿಂದ ನಿಃಶಂಕವಾದ ಗೆಲಿಲಿಯೋನ ಸಿದ್ಧಾಂತವು ಸನಾತನಿಗಳ ಶಬ್ದಪ್ರಾಮಾಣ್ಯವಾದೀ ಬುರುಸುಗಟ್ಟಿದ ಬುದ್ಧಿಗೆ ಸರಿದೋರಲಿಲ್ಲ. ಪರಂಪರಾಗತ ಪ್ರಾಚೀನ ಗ್ರಂಥಸ್ಥ ಹೇಳಿಕೆಗಳ ಸತ್ಯಾಸತ್ಯವನ್ನು ಪುನರ್ ವಿಮರ್ಶಿಸುವಷ್ಟು ಸೌಜನ್ಯ ಗತಾನುಗತಿಕ ಧರ್ಮಾಧಿಕಾರಿಗಳಲ್ಲಿ ಕಂಡು ಬರಲಿಲ್ಲ. ತನ್ನ ಹೊಸ ಸಿದ್ಧಾಂತವನ್ನು ಧರ್ಮಗ್ರಂಥಗಳ ಹಂಗಿಲ್ಲದೇ ಪ್ರತಿಪಾದಿಸುವ ಧೈರ್ಯ ತೋರಿಸಿದಕ್ಕಾಗಿ ಪಾಪ ಗೆಲಿಲಿಯೋನಿಗೆ ಕ್ಷಮಸ್ವ ಎನ್ನ ಬೇಕಾಯಿತು. ಆದರೆ ಸತ್ಯವು ಸತ್ಯವೇ! ಕೊಲುಂಬಸ್ ಮೊದಲಾದವರು ಮಹಾಸಾಗರಗಳನ್ನು ದಾಟಿ ಹೊಸ ಹೊಸ ಭೂಭಾಗಗಳನ್ನು ಗೊತ್ತು ಹಚ್ಚಿ, ಮುಂದೆ ಸರ್ ಫ್ರಾನ್ಸಿಸ್ ಡ್ರೇಕ್ ಮೊದಲಾದವರು ಜಲಮಾರ್ಗದಿಂದ ಭೂಪ್ರದಕ್ಷಿಣೆಯನ್ನು ಹಾಕಿ, ಗೆದ್ದಲಿ ಮುತ್ತಿದ ತಾಡವಾಲಿಗಳಲ್ಲಿದ್ದ ಜೊಳ್ಳು ಊಹೆಗಳಿಗೆ ಮತ್ತೆ ಮೇಲಕ್ಕೆ ತಲೆಯೆತ್ತದಂತೆ ಆಘಾತಗಳನ್ನು ಮಾಡಿದ ಮೇಲೆ ಶಬ್ದಪ್ರಾಮಾಣ್ಯವಾದಿಗಳು ಚೆಪ್ಪಾಗಿ ಸುಮ್ಮನಾದರು. ವಿಜ್ಞಾನವೆಂದೊಡನೆ ಗತಪೂಜಕ ಸನಾತನಿಗಳಿಗೆ ಅಸಹ್ಯ ಸಿಟ್ಟು ಬರುವ ಮುಖ್ಯ ಕಾರಣವೆಂದರೆ ವೈಜ್ಞಾನಿಕ ಸಿದ್ಧಾಂತಗಳೂ ಮತ್ತು ಸಂಶೋಧನಗಳು ಅಂಧಶ್ರದ್ಧರ ಕುರುಡು ನಂಬುಗೆಗೆ ತಾಳಲಾರದಷ್ಟು ಏಟು ಕೊಡುವವು. ವಾಸ್ತವದಲ್ಲಿ ಧರ್ಮಶಾಸ್ತ್ರಜ್ಞರು ಕಾಲಕಾಲಕ್ಕೆ ತಮ್ಮ ಧಾರ್ಮಿಕ ತತ್ವ ಪ್ರಣಾಲಿಗಳನ್ನು ಧಾರಣಾಶಕ್ತಿ ಉಳಿಯುವಂತೆ ಮಾರ್ಪಡಿಸುತ್ತ ಸಾಗಬೇಕು. ಹಾಗೆ ಮಾಡದೇ

ಹೋದರೆ ಬೆಳೆಯುತ್ತ ಹೊರಟ ಹೊಸ ಸ್ವರೂಪದ ಸಮಾಜಕ್ಕೆ ಹಿಂದಿನ ಕಾಲದ ರೀತಿನೀತಿಗಳು ಸರಿಹೋಗದ್ದರಿಂದ ಸಮಾಜದಲ್ಲಿ ಧಾರಣಾಶಕ್ತಿಯಿಲ್ಲದ ಧರ್ಮ ಕಂಡುಬರುವದು. ಇದೇ ಮಿಥ್ಯಾಚಾರದ ಮೂಲ ಕಾರಣ. ಧರ್ಮನಿಷ್ಠೆಗೂ ಪ್ರಗತಿ ಶೀಲತೆಗೂ ಸನಾತನಿಗಳು ತಿಳಿಯುವ ತೆರದಲ್ಲಿ ಯಾವ ವಿರೋಧವೂ ಇಲ್ಲ. ಧಾರಣಾಶಕ್ತಿಯಿಂದ ಮಾತ್ರ ಧರ್ಮ ಎಂಬ ಮಾತು ಸನಾತನಿಗಳಿಗೆ ಸಮ್ಮತವೇ ಇದೆ. ಆದರೆ ಧಾರಣಾಶಕ್ತಿ ಉಳಿಯಬೇಕಾದರೆ ಸಮಾಜದಲ್ಲಿ ಮಾರ್ಪಾಟು ಆದಂತೆ ದಾರ್ಶನಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಇವೆಲ್ಲ ಅಂಗಗಳಲ್ಲಿಯೂ ಕಾಲಕ್ಕೆ ತಕ್ಕ ರೂಪಾಂತರಗಳು ಕಂಡು ಬರುವದು ಅಪರಿಹಾರ್ಯ ಎಂಬ ಮಾತು ಮಾತ್ರ ಗತಾನುಗತಿಕರಿಗೆ ಗೊತ್ತಿರುವದಿಲ್ಲ. ಸನಾತನ ಧರ್ಮ ಎಂದರೆ ಪ್ರಾಚೀನ ಕಾಲದ ಧರ್ಮ ಎಂಬ ತಪ್ಪು ತಿಳುವಳಿಕೆ ಅವರಲ್ಲಿ ರೂಢವಾಗಿದೆ. ವಾಸ್ತವದಲ್ಲಿ ಸನಾತನ ಎಂದರೆ ಶಾಶ್ವತವಾದುದು, ತ್ರಿಕಾಲಾ ಬಾಧಿತವಾದುದು. ಯಾವುದು ಶಾಶ್ವತವೋ ಅದು ಪ್ರಾಚೀನವೂ ಅಹುದು, ಇಂದಿನದೂ ಅಹುದು ಮುಂದಾದರೂ ಅಬಾಧಿತವಾಗಿಯೇ ಉಳಿಯುವ ಕ್ಷಮತೆಯುಳ್ಳದ್ದು. ಕೊಟ್ಟ ಮಾತು ಪಾಲಿಸಬೇಕು, ಬಲಿಷ್ಠನು ದುರ್ಬಲನಿಗೆ ಸಹಾಯ ನೀಡಿ ದಯೆ ತೋರಿಸಬೇಕು. ಮುಂತಾದ ನೈತಿಕ ತತ್ವಗಳು ಸನಾತನ ಧರ್ಮ ಎನಿಸುತ್ತವೆ. ಇಂಥ ಸರ್ವಸಮ್ಮತವಾದ ಮಾನವೀ ಬುದ್ಧಿಗೂ, ಭಾವನೆಗೂ ಅವಿರೋಧವಾಗಿ ಸರಿದೋರುವ ಶಾಶ್ವತ ತತ್ವಗಳಿಗೆ ಮಹಾಭಾರತದಲ್ಲಿ ಅಲ್ಲಲ್ಲಿ **"एष धर्मः सनातनः"** ಎಂದು ಉಲ್ಲೇಖಮಾಡಲಾಗಿದೆ ಈ ಸನಾತನ ಧರ್ಮ, ಎಂದರೆ ನೈತಿಕ ತತ್ವ, ಕೇವಲ ಹಳೆಯದಲ್ಲ. ಅದರ ಸತ್ಯವು ತ್ರಿಕಾಲಾಬಾಧಿತ. ಮೂರೂ ಕಾಲಗಳಲ್ಲಿಯೂ ಅಬಾಧಿತವಾಗಿ ಉಳಿಯುವಂತಹದು. ಇದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಒಂದು ಮೊಳ ಅಗಲವಾದ ಪಂಜಿಯನ್ನುಟ್ಟು ಪೂಜಿಸಬೇಕು ಇಷ್ಟೇ ಉದ್ದ ಚಂಡಿಕೆ ಇಡಬೇಕು ಅಥವಾ ಗಡ್ಡ ಬೆಳೆಯಿಸಬೇಕು ಅಥವಾ ಸಂಪೂರ್ಣ ಮುಂಡನಮಾಡಿ ಬಿಡಬೇಕು ಎಂಬ ಆದೇಶಗಳು ಸನಾತನ ಧರ್ಮಗಳಾಗಲಾರವು !

ರಾಜ-ಪ್ರಭುತ್ವದ ಕಾಲಖಂಡದಲ್ಲಿ ಅರಸರು ದೇವಸ್ವರೂಪ, ಅವರ ಅಧಿಕಾರವೂ ದೇವದತ್ತ ಎಂಬ ಭಾವನೆ ಮುಗ್ಧ ಭಾವಿಕ ಜನಗಣದಲ್ಲಿ ಬೇರೂರಿದ್ದರಿಂದ ಅರಸರು ಸಹಜವಾಗಿ ನಿರಂಕುಶರಾದರು. ನೀವು ಹೀಗೇಕೆ ಮಾಡಿದಿರಿ? ನಿಮ್ಮಿಂದ ಇದು ಅನ್ಯಾಯವಾಯಿತು. ಎಂದು ಮುಂತಾಗಿ

ರಾಜರಿಗೆ ಹೇಳುವ ಧೈರ್ಯ ಯಾರಿಗೂ ಇದ್ದಿಲ್ಲ. ರಾಜಕಾರಣದಲ್ಲಿ ಅರಸನ ಬಗೆಗೆ ಜನರು ಅಂಧಃಶ್ರದ್ಧರಿದ್ದಂತೆ ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಇದೇ ತೆರದ ಅಂಧನಿಷ್ಠೆ ಪ್ರಭಾವಿಯಾಗಿದ್ದಿತು. ಕುಟುಂಬದೊಳಗಿನ ಒಡೆಯನು ನಿರಂಕುಶನೇ ಆಗಿದ್ದನು. **"मातृदेवो भव", "पितृदेवो भव", "आचार्यदेवो भव"** ಇವೇ ಮುಂತಾದ ವಚನಗಳು ಪ್ರಪಂಚದ ಎಲ್ಲ ನಾಡುಗಳಲ್ಲಿಯೂ, ಎಲ್ಲ ನುಡಿಗಳಲ್ಲಿಯೂ, ರಾಜಪ್ರಭುತ್ವದಲ್ಲಿ ಕಂಡು ಬರುವವು. ಅಂತೂ ಈ ಕಾಲಖಂಡದಲ್ಲಿ ಎಲ್ಲೆಲ್ಲಿಯೂ ಸೇವ್ಯ, ಸೇವಕ ಭಾವವೇ ಶಿಷ್ಟ ಸಮ್ಮತವಾಗಿದ್ದಿತು. ಧರ್ಮ ಕ್ಷೇತ್ರದಲ್ಲಿಯೂ ಧರ್ಮಗುರುಗಳು ಅನಿಯಂತ್ರಿತ ಸತ್ತಾಧಾರಿಗಳು. ಅವರಿಗೆ ಹೀಗೇಕೆ ಹಾಗೇಕೆ ಎಂದು ಕೇಳಲು ಯಾರಿಗೂ ಅವಕಾಶವಿದ್ದಿಲ್ಲ. ಹಲವು ಸಲ ಅವರು ರಾಜನ ಮೇಲೆ ಸಹ ಆಕ್ರಮಣ ಮಾಡುತ್ತಿದ್ದರು. ಈಗ ನಾವು ಯಾವುದಕ್ಕೆ ಶಾಸನಗಳು (ಅಥವಾ ಕಾಯಿದೆ) ಎನ್ನುವೆವೋ ಅವುಗಳನ್ನೆಲ್ಲ ಮಾಡುವ ಅಧಿಕಾರ ಧರ್ಮಶಾಸ್ತ್ರ ವಿಶಾರದ ಸ್ಮೃತಿಕಾರರ ಅಧಿಕಾರಕ್ಕೊಳಪಟ್ಟ ಕೆಲಸವಿದ್ದಿತು. ಸ್ಮೃತಿಗಳಿಗೆ ಶೃತಿಗಳು ಯಾವಾಗಾದರೂ ಆಧಾರವು ಇರುತ್ತವೆ ಎಂಬ ಮತವು ರೂಢವಾಗಿದ್ದಿತು. ರಘುವಂಶದ ೨ನೆಯ ಸರ್ಗದಲ್ಲಿ **"श्रुतेरिवार्थं स्मृतिरन्वगच्छत्"** ಎಂಬ ಕಾಲಿದಾಸನು ಯೋಜಿಸಿದ ಉಪಮೆಯಲ್ಲಿ ನನ್ನ ಹೇಳಿಕೆ ಸ್ಪಷ್ಟವಾಗುತ್ತಿದೆ. ಇನ್ನು ಶೃತಿಗಳಂತೂ ದೇವವಾಣಿಗಳೇ; ಅಪೌರುಷೇಯ ಎಂಬ ನಂಬುಗೆ ಅತ್ಯಂತ ಶಿಷ್ಟ ಸಮ್ಮತವಾದುದು. ಒಟ್ಟಿನಲ್ಲಿ ವಿಚಾರ ಮತ್ತು ಆಚಾರ ಸ್ವಾತಂತ್ರ್ಯದ ದೃಷ್ಟಿಯಲ್ಲಿ ಈ ಕಾಲಖಂಡವು ವ್ಯಕ್ತಿ ವಿಕಾಸಕ್ಕೆ ತೀರ ವಿಘಾತಕವಾದುದು. ರಾಜಕೀಯ ದಾಸ್ಯದಂತೆ ವೈಚಾರಿಕ ದಾಸ್ಯವೂ ಮಿತಿಮೀರಿದ್ದಿತು.

ಸಮಾಜವಿಕಾಸದ ಇತಿಹಾಸದಲ್ಲಿ ರಾಜಪ್ರಭುತ್ವಕ್ಕೆ ಬಹಳ ಮಹತ್ವವಿದೆ. ಈ ಕಾಲಖಂಡದ ಮುಖ್ಯ ದೋಷವೆಂದರೆ ದೈವೀಕರಣದ ಹುಚ್ಚು. ಯಾವದೇ ವ್ಯಕ್ತಿ ಇಲ್ಲವೆ ವಸ್ತು ಪೂಜ್ಯ ಇಲ್ಲವೆ ಗೌರವಾರ್ಹವಾಗಲಿಕ್ಕೆ ಅದರ ದೈವೀಕರಣ ಆವಶ್ಯಕವೆನಿಸುತ್ತಿತ್ತು. ರಾಜರಂತೂ ಪ್ರತ್ಯಕ್ಷ ದೇವತೆಗಳು. ಗುರುಹಿರಿಯರು ದೇವತೆಗಳೆ. ಧರ್ಮಸೂತ್ರಗಳು ದೇವವಾಣಿ. ಅಸಾಮಾನ್ಯ ಪ್ರತಿಭೆ ಎಲ್ಲಿಯೇ ಕಾಣಲಿ ಅದು ಈಶದತ್ತವೆಂದೇ ಜನರು ಭಾವಿಸುತ್ತಿದ್ದರು. ಕಾಲಿದಾಸ ಮೊದಲು ಕಗ್ಗ ಕುರುಬ, ನಂತರ ಸರಸ್ವತೀ ಪ್ರಸಾದದಿಂದ ವರಕವಿಯಾದನೆಂಬ ಅಸಂಬದ್ಧ, ಹಾಸ್ಯಾಸ್ಪದ ನಂಬುಗೆಗೆ ಪಂಡಿತರೂ ತಲೆದೂಗುತ್ತಿದ್ದರು. ಶಾಪಕ್ಕೀಡಾದ ಸರಸ್ವತಿ ಭೂಲೋಕಕ್ಕೆ ಇಳಿದು ಅವ

ಳಿಂದುಂಟಾದ ವಂಶದಲ್ಲಿಯೆ ತಾನು ಹುಟ್ಟಿದವನೆಂದು ಬಾಣ ಕವಿಯು ಹೇಳಿ ಕೊಳ್ಳುತ್ತಾನೆ. ಅಸಾಮಾನ್ಯ ಪಂಡಿತರ ಗತಿಯೆ ಹೀಗಾಗಿರುವಾಗ ಸಾಮಾನ್ಯ ಜನರ ಗತಿ ಏನಾಗಿರಬಹುದು?

'ನನ್ನ ಅಭಿಪ್ರಾಯ ಹೀಗಿದೆ, ಉಳಿದವರ ಅಭಿಪ್ರಾಯ ಹೇಗೇ ಇರಲಿ' ಎನ್ನುವ ಧೈರ್ಯ ಯಾರಿಗೂ ಇದ್ದಿಲ್ಲ. ಅಧಿಕಾರ ವಾಣಿಯ (Authoritarianism, Dogmatism) ಕಾಲವದು. ಸಾಹಿತ್ಯ, ಸಂಗೀತ, ಕಲಾ, ಉದ್ದಿಮೆ, ಪ್ರತಿಯೊಂದು ಚಟುವಟಿಕೆಗೆ ಈಶ ಪ್ರಸಾದ ಮೊದಲು. ದೊಡ್ಡ ಮರಗಳ ನೆಳಲಿನಲ್ಲಿ ಸಣ್ಣ ಗಿಡಗಳ ಬೆಳವಣಿಗೆ ನಿಂತು ಹೋಗುವಂತೆ ದೇವ ದೇವತೆಗಳ ತಥಾಕಲ್ಪಿತ ಕೃಪಾಛತ್ರದಲ್ಲಿ ಮಾನವನ ಮಾನವತೆ ಕುಂಠಿತವಾಗಿ ಹೋಯಿತು. ಎಲ್ಲ ಮಾನವರಲ್ಲಿ ಬಾಂಧವ್ಯವಿದೆ ಎಂಬುದರ ಕಲ್ಪನೆಯೆ ಇರಲಿಲ್ಲ ಅಂದಿನರಿಗೆ. ನಿರಂಕುಶ ಪ್ರಭುತ್ವದ ಕಾಲವದು. 'ಧರ್ಮಶಾಸ್ತ್ರ' ಇಲ್ಲವೆ 'ಹಿರಿಯರ ಹೇಳಿಕೆ ಹೀಗಿದೆ' ಎಂದರಾಯಿತು. ಅದರ ಪ್ರಾಮಾಣ್ಯ ವನ್ನು ಯಾರೂ ಪ್ರಶ್ನಿಸುತ್ತಿರಲಿಲ್ಲ. ಒಟ್ಟಾರೆ ಮಾನವೀ ಬುದ್ಧಿಯನ್ನು ಮಾನವೀ ಭಾವನೆಯು ನಿರಂಕುಶವಾಗಿ ಆಳುತ್ತಿತ್ತು.

ಅಂದಿನ ಆ ಅಂಧಶ್ರದ್ಧೆಯ ನಿರಂಕುಶ ಪ್ರಭುತ್ವದ ಕಾಲಖಂಡಕ್ಕೂ ಇಂದಿನ ನಮ್ಮ ಪ್ರಾಜ್ಞ, ಬುದ್ಧಿಪ್ರಾಮಾಣ್ಯವಾದೀ ಜನತಾ ಪ್ರಭುತ್ವದ ಕಾಲಖಂಡಕ್ಕೂ ಅಜಗಜಾಂತರವಿದೆ. ಈ ವ್ಯತ್ಯಾಸವು ಸ್ಪಷ್ಟವಾಗಲು ಸಹಾಯವಾಗಬೇಕೆಂದು ನಾನು ರಾಜಪ್ರಭುತ್ವದ ಕಾಲದ ಹಲವು ಅಂಶಗಳನ್ನು ವಿಸ್ತಾರದಿಂದ ಬಣ್ಣಿಸಿದೆ. ಅಂದಿನ ಯಾವ ಬುದ್ಧಿವಂತನೂ ಸ್ವತಂತ್ರವಾಗಿ ವಿಚಾರಮಾಡುವ ಪರಿಸ್ಥಿತಿಯಲ್ಲಿದ್ದಿಲ್ಲ. ಇಂದಿನರಿಗೆ ಇರುವ ವಿಚಾರ ಮತ್ತು ಭಾಷಣ ಸ್ವಾತಂತ್ರ್ಯವು ಜನತಾರಾಜ್ಯದ ಆದ್ಯ ಲಕ್ಷಣವಾಗಿದೆ. ಇಂದಿನ ಸಮಾಜದಲ್ಲಿ ಯಾವ ನಾಗರಿಕನಿಗೂ ಯಾವ ಸ್ಥಾನವೂ ಅಪ್ರಾಪ್ಯವಲ್ಲ. ವಂಶ, ವರ್ಣ, ಲಿಂಗ ಮೊದಲಾದ ಸಂಗತಿಗಳು ಹಿಂದಿನಂತೆ ಅವನಿಗೆ ಬಾಧಕ ಅಥವಾ ಸಾಧಕವಾಗವು. ನಮ್ಮ ಜಗನ್ನಾಗರಿಕತೆ ಇನ್ನೂ ಬಾಲ್ಯದಲ್ಲಿದೆ. ರಾಜಪ್ರಭುತ್ವವು ನಷ್ಟವಾದರೂ ಅದು ತನ್ನ ಹಿಂದೆ ಬಿಟ್ಟು ಹೋದ ಹಲವು ಅನಿಷ್ಟ ಕೊಡುಗೆಗಳು ನಮ್ಮಗಳಿಗೆ ಇನ್ನೂ ಕಾಡಿಸುತ್ತಿವೆ. ತಲೆಯಿಂದ ತಲೆಗೆ ಸಾಗಿಬಂದ ಧರ್ಮ, ಮತ, ಪಂಥ, ಜಾತಿ, ವರ್ಣ, ವರ್ಗ ಮುಂತಾದ ವುಗಳ ದುರಭಿಮಾನ ನಮ್ಮಗಳ ಸಾರ್ವಜನಿಕ, ರಾಷ್ಟ್ರೀಯ, ಅಂತರ್ರಾಷ್ಟ್ರೀಯ ನಾಗರಿಕತೆಗೆ ಅಡ್ಡಬರುತ್ತಲಿದೆ. ವಸಾಹತುಗಾರಿಕೆಯ, ಸಾಮ್ರಾಜ್ಯವಾದೀ

ಆಕ್ರಮಣ ಶೀಲತೆ ಇನ್ನೂ ಮಾಯವಾಗಿಲ್ಲ. ಈ ಶತಮಾನದ ಪೂರ್ವಾರ್ಧ ದಲ್ಲಿ ಎರಡು ಜಾಗತಿಕ ಯುದ್ಧಗಳಾದವು. ಜಾಗತಿಕ ಪೇಟೆಗಾಗಿ ಸಾಮ್ರಾಜ್ಯವಾದಿಗಳಲ್ಲಿ ಸಾಗಿದ ಆಕ್ರಮಣಶೀಲ ಸ್ಪರ್ಧೆ ಯುದ್ಧಗಳ ಕಾರಣ. ಮೊದಲಿನ ಮಹಾಯುದ್ಧದಿಂದ ಸೊವಿಯೆಟ್ ರಶಿಯಾದ ಕಮ್ಯೂನಿಝಂ ಹುಟ್ಟಿತು. ಸಾಮ್ರಾಜ್ಯವಾದಿಗಳಿಗೆ ಕ್ಷಯರೋಗ ಹತ್ತಿತು. ಎರಡನೆಯದರಿಂದ ಸಾಮ್ರಾಜ್ಯಗಳ ಮತ್ತು ವಸಾಹತುಗಾರಿಕೆಯ ವಿಘಟನೆ ಆಗಿ ಏಶಿಯನ್ ಮತ್ತು ಆಫ್ರಿಕನ್ ಜನಾಂಗಗಳ ಪಾರತಂತ್ರ್ಯವು ಅಳಿಯುವ ಸಂದರ್ಭ ಬಂದಿತು. ಹಳೆಯ ರಾಷ್ಟ್ರ ಸಂಘ ಹೋಗಿ ಸಂಯುಕ್ತ ರಾಷ್ಟ್ರಗಳ (United Nations) ಸಂಘಟನೆ ವಿಶ್ವಶಾಂತಿಗಾಗಿ ಹೆಣಗುತ್ತಿದೆ. ಆಕ್ರಮಣ ಶೀಲ ಪರಂಪರಾಗತ ಸಂಸ್ಕಾರಗಳ ಪರಿಣಾಮವಾಗಿ ಈ ಸಂಸ್ಥೆಯ ಸದಸ್ಯ ರಾಷ್ಟ್ರಗಳಲ್ಲಿ ಒಬ್ಬರೊಬ್ಬರ ಬಗೆಗೆ ಇನ್ನೂ ಸಂದೇಹ, ಅಸೂಯೆ, ಭಯಾದಿಗಳು ತಲೆದೋರುತ್ತಿವೆ. ಅಂತೆಯೆ ಅಣ್ವಸ್ತ್ರಗಳ ಮೇಲಾಟ ಕಂಡುಬರುತ್ತಿದೆ. ಆದರೆ ಈ ಅಸ್ತ್ರಗಳನ್ನು ಪಯೋಗಿಸಿ ಯುದ್ಧಮಾಡಿದ್ದಾದರೆ ಇಡಿಯ ಜಗತ್ತಿನ ನಾಶ ಆಗುವುದು ಖಂಡಿತ ಎಂಬ ಮಾತು ಈಗ ಎಲ್ಲರಿಗೂ ಗೊತ್ತಿದೆ. ಮೂರನೆಯ ಮಹಾಯುದ್ಧವು ಶಕ್ಯವಿದ್ದರೂ ಅಸಂಭವನೀಯ. ಪ್ರಬಲ ಜನಾಂಗಗಳು ಒಬ್ಬರೊನ್ನೊಬ್ಬರು ಆಡಿಕೊಳ್ಳದೆ ಪರಸ್ಪರ ಮಾತಾಡಬೇಕೆಂಬ ಭಾರತರತ್ನ ಪಂಡಿತ ನೆಹರೂ ಅವರ ಹಿತೋಕ್ತಿಯನ್ನು ವಿಶ್ವಶಾಂತಿದೂತರು ಸ್ವಾಗತಿಸಿದ್ದಾರೆ. ಪಂಚಶೀಲವನ್ನು ಎಲ್ಲರೂ ಆಚರಿಸಿದರೆ ತತ್ವ ಪ್ರಣಾಲಿಗಳ ವೈವಿಧ್ಯವಿರುತ್ತಲೂ ವಿಶ್ವಬಾಂಧವ್ಯವು ಪ್ರಭಾವಿಯಾಗಿ ಶಾಂತಿ ಸುಖ, ಸಮೃದ್ಧಿಗಳಿಂದ ಪ್ರಪಂಚವು ನಲಿಯುವುದು ಖಂಡಿತ.

**ಮೇದಿನಿಯು ನಾವೆಲ್ಲ । ಸೋದರರು ಒಂದಾಗೆ**<br>
**ಆದರದ ನಮ್ಮ ಸಹಕಾರಿ ಜೀವನಕೆ**<br>
**ಮೋದವೇ ನಿತ್ಯ ಮರ್ಮಜ್ಞ** ॥ ೧ ॥

**ಒಂದೆ ಮನೆತನ ಒಂದೆ । ಒಂದು ಗುರಿ ನಮ್ಮಗಳ**<br>
**ಒಂದೆ ತೆರದಲ್ಲಿ ಬಗೆದರೂ ವೈವಿಧ್ಯ**<br>
**ದಂದವೂ ಬೇಕು ಮರ್ಮಜ್ಞ** ॥ ೨ ॥

**ಪೊಡವಿಯೇ ನಿನ್ನದಿರೆ । ಬಡವನಾಗುವುದೇಕೆ ?**<br>
**ಗಡಿಯುಳ್ಳ ನಾಡು ನಿನಗೇಕೆ? ಗಡಿಯಿಲ್ಲ**<br>
**ಪೊಡವೀಶನಾಗು ಮರ್ಮಜ್ಞ** ॥ ೩ ॥

ಜಾಗತಿಕ ಸಂಪರ್ಕ । ಜಾಗತಿಕ ಸಂಪತ್ತು
ಭೋಗ ಸೌಭಾಗ್ಯನಮಗುಂಟು ಜಾಗತಿಕ
ನಾಗರಿಕರಾಗಿ ಮರ್ಮಜ್ಞ ॥ ೪ ॥

ದ್ವೇಷದಾ ಮೇಲಾಟ । ರೋಷದಾ ಹೋರಾಟ
ನಾಶದಾ ಯುದ್ಧ ಗೋಳಾಟ ತಪ್ಪುವವು
ವಿಶ್ವವೊಂದಾಗೆ ಮರ್ಮಜ್ಞ ॥ ೫ ॥

ಸಮತೆಯಿಂ ಮಮತೆಯೋ । ಮಮತೆಯಿಂ ಸಮತೆಯೋ ?
ಸಮವೆಂದು ಕಾಂಬ ಇವುಗಳೋಳ್ ಸಮತೆಯೋ
ಮಮತೆಯಾ ತಾಯಿ ಮರ್ಮಜ್ಞ ॥ ೬ ॥

ನಿನ್ನಂತೆಯೋ ನಾನು । ನನ್ನಂತೆ ನೀನೆಂಬ
ರನ್ನ ಸುಖದುಃಖ ವಿವೇಕವೆ ಸಾಮ್ಯದಾ
ಸನಾತನ ವಾದ ಮರ್ಮಜ್ಞ ॥ ೭ ॥

ನಾಡು ಬರಿ ಸ್ವಾಯತ್ತ । ನಾಡಿಗ ಪರಾಯತ್ತ!
ಬೇಡ ಈ ಕೇಡು; ಸ್ವಾಯತ್ತನಾಡಿಗನೆ
ನಾಡಿನಾ ನಾಡಿ ಮರ್ಮಜ್ಞ ॥ ೮ ॥

ನಾಡನೇ ಪಾಡುತ್ತ । ನಾಡಿಗನ ಮೆಟ್ಟುವುದೆ ?
ನಾಡಿಗನ ಬಿಟ್ಟು ನಾಡುಂಟೆ? ಗಿಡಸುಟ್ಟ
ಕಾಡು ಸುಡುಗಾಡು ಮರ್ಮಜ್ಞ ॥ ೯ ॥

ಮುಖಂಡರು ಇವರಾಗೆ । ಶಿಖಂಡಿಗಳವರಾರು ?
ಅಖಂಡವೆ ನಾವು ಇರುವಾಗ ಕೆಲಸಿಲ್ಲ
ಸಖಂಡತೆ ಏಕೆ ? ಮರ್ಮಜ್ಞ ॥ ೧೦ ॥

ಸಮಾಜಕೆ ಪ್ರಾಧಾನ್ಯ । ಸಮಂಜಸವೀಮಾತು
ಸಮಷ್ಟಿಗೆ ನಷ್ಟ ತಗಲದಾ ವ್ಯಷ್ಟಿಯಾ
ನೆಮ್ಮದಿಯು ಇಷ್ಟ ಮರ್ಮಜ್ಞ ॥ ೧೧ ॥

ಭೇದವೇ ಬೇಡವೇ? । ಖೇದದಾ ಈ ಮಾತು !
ಸ್ವಾದು ವೈವಿಧ್ಯ ಬಾಳು ರುಚಿಸುವ ಉಪ್ಪು
ಭೇದವೂ ಮಿಷ್ಟ ಮರ್ಮಜ್ಞ ॥ ೧೨ ॥

ಒಂದರೊಳ್ ಭೇದವಿದೆ । ಒಂದುಂಟು ಭೇದದೊಳ್
ಭೇದದಾ ಒಂದು ಒಮ್ಮನದಿ ಕಂಡೊಡನೆ
ಭೇದವೆತ್ತಣ್ಣ ಮರ್ಮಜ್ಞ ? ॥ ೧೩ ॥

ಸ್ವರಾಜ್ಯವಿದ್ದರಾಯ್ತೆ । ಸುರಾಜ್ಯವೂ ಸಾಲದು
ಸ್ವರಾಜ್ಯದಿ ಸಾಮ್ಯಬಾರದಿರೆ ಆ ರಾಜ್ಯ
ಅರಾಜಕ ನೋಡು ಮರ್ಮಜ್ಞ ॥ ೧೪ ॥

ಆದಿತ್ಯಸಂತತಿಯೆ । ಆದಿಯಲಿ ನಾವೆಲ್ಲ
ಆದಿತ್ಯಪುತ್ರಿ ಮೇದಿನಿಯು, ಮಾನವನು
ಮೇದಿನಿಯ ಪುತ್ರ ಮರ್ಮಜ್ಞ ॥ ೧೫ ॥

ನಾನು ನಾನೆಂಬುದೇ । ನೀನು ನೀನೆಂದಾಗೆ
ನಾನು ನೀನೆಂಬುದೇ 'ನಾವು' ಎಂದಾಗಿ
ನಾನು ನೀನೊಂದು ಮರ್ಮಜ್ಞ ॥ ೧೬ ॥

ನನ್ನದಿದು ನಿನ್ನದದು । ಎನ್ನುವುದು ಇನ್ನೇಕೆ ?
ನನ್ನ ನಿನ್ನೆಂಬುದೆಲ್ಲದೂ ಒಂದಾಗೆ
ನಿನ್ನನನ್ನೇಕೆ ಮರ್ಮಜ್ಞ ॥ ೧೭ ॥

ನಮ್ಮಗಳ ಕುಲವಿಂತು । ನಿಮ್ಮಗಳ ನುಡಿಯಂತು
ಹೆಮ್ಮೆಯಿಂತೇಕೆ ? ಮಾನವೀ ಸಂಸ್ಕೃತಿಯೆ
ನಮ್ಮಗಳ ಹೆಮ್ಮೆ ಮರ್ಮಜ್ಞ ॥ ೧೮ ॥

ಒಮ್ಮನವೆ ನಮ್ಮಗಳ । ಹೆಮ್ಮೆಯಾ ನೆಮ್ಮದಿಯು
ನಮ್ಮಗಳ ಪಂಚಶೀಲಗಳೆ ಆಳುವವು
ನಮ್ಮ ವಿಜ್ಞಾನ ಮರ್ಮಜ್ಞ ॥ ೧೯ ॥

A plague on Diplomacy!

ರಾಜ್ಯತಂತ್ರದತಂತ್ರ । ವ್ಯಾಜಪಟು ಬಟುಗಳೇ
ವ್ಯಾಜದಲಿ ವೇಶ್ಯೆಯುನೆ ಮೀರಿದಿರಿ; ಸಾಕು
ದೌರ್ಜನ್ಯವಿನ್ನು ಮರ್ಮಜ್ಞ ! ॥ ೨೦ ॥

A war to end war?

ಯುದ್ಧ ನಿರ್ಮೂಲಿಸಲು । ಯುದ್ಧವನೆ ಹೂಡುವುದೆ ?
ಕ್ರೋಧಕ್ಕೆ ಕ್ರೋಧ ಶಾಮಕವೆ ? ಆರುವುದೆ
ಇಂಧನದಿ ಬೇಗೆ, ಮರ್ಮಜ್ಞ ? ॥ ೧೦ ॥

ನೀತಿವಂತಗೆ ನಿತ್ಯ । ಪ್ರೀತಿಯಾ ಮುತ್ತಿಗೆಯು
ನೀತಿಯಿಂದಿನ್ನು ಧರ್ಮವುಂಟೇ ಮೇಗು?
ನೀತಿ ಪರಮಾರ್ಥ ಮರ್ಮಜ್ಞ ॥ ೧೧ ॥

ಜೀರ್ಣವಾಗದು ಪೂರ್ಣ । ಪೂರ್ಣವಲ್ಲದು ಜೀರ್ಣ
ಜೀರ್ಣ ವೈಷಮ್ಯ ಕಿತ್ತೊಗೆದು ಎತ್ತು ನೀ
ಪೂರ್ಣದಾ ಸಾಮ್ಯ ಮರ್ಮಜ್ಞ ॥ ೧೨ ॥

ಪೂರ್ಣ ವ್ಯಕ್ತಿವಿಕಾಸ । ಪೂರ್ಣ ಶೀಲವಿಲಾಸ
ಪೂರ್ಣ ಸಮದರ್ಶಿ ಜೀವನಕೆ ಇಲ್ಲಿಯೋ
ಪೂರ್ಣ ಆನಂದ ಮರ್ಮಜ್ಞ ॥ ೧೩ ॥

ಶಾಠ್ಯದಿಂ ಗೆಲುವಿರಾ । ಶಠರನ್ನ? ಕೆಡಬೇಡಿ
ಶಠರನ್ನೆ ಮೀರಿ ಶಾಠ್ಯದಲಿ ಎತ್ತುವಿರಿ
ಶಾಠ್ಯದಾ ನೀತಿ ಮರ್ಮಜ್ಞ ॥ ೧೪ ॥

ಕಾಯಕವೆ ನಮ್ಮಗಳ । ಧ್ಯೇಯದಾ ಸಂಗೀತ
ಶ್ರೇಯವೇ ವಾದಿ ಪ್ರೇಯಸ್ಸು ಸಂವಾದಿ
ಸ್ತೇಯವೇ ವರ್ಜ್ಯ ಮರ್ಮಜ್ಞ ॥ ೧೫ ॥



